## ಆಸ್ತಿಕ ಬಂಧುಗಳಲ್ಲಿ ಒಂದು ವಿನಮ್ರ ಮನವಿ

1 ಶ್ರೀ ಸಿದ್ಧಗಂಗಾ ಮಠದಲ್ಲಿ ನಿತ್ಯ ನಾಲ್ಕು ಸಹಸ್ರ ವಿದ್ಯಾರ್ಥಿಗಳಿಗೆ ದಾಸೋಹ ವ್ಯವಸ್ಥೆ ನಡೆಯುತ್ತಿದೆ.

2 ನಾಲ್ಕು ಸಹಸ್ರ ವಿದ್ಯಾರ್ಥಿಗಳು ವಿವಿಧ ಸಮಾಜದಿಂದ ಬಂದವರಾಗಿರುತ್ತಾರೆ. ಜಾತ್ಯತೀತ ಮನೋಧರ್ಮವನ್ನು ರೂಢಿಸಿಕೊಂಡು ಬೆಳೆಯುವ ಮುಕ್ತ ವಾತಾವರಣ ಇಲ್ಲಿನ ವೈಶಿಷ್ಟ್ಯ.

3 ನಿತ್ಯ ಬರುವ ಸಹಸ್ರ ಸಹಸ್ರ ಯಾತ್ರಾರ್ಥಿಗಳಿಗೂ ದಾಸೋಹ ನಡೆಯುತ್ತಿದೆ.

4 **"ಸಿದ್ಧಗಂಗೆಯ ಊಟ ಶಿವಗಂಗೆಯ ನೋಟ"** ಎಂಬುದು ಗಾದೆ ಮಾತಾಗಿದೆ.

5 **" ಪ್ರಸಾದ ತೆಗೆದು ಕೊಂಡು ಹೋಗಿ "**-ಎಂಬುದೇ ಪರಮ ಪೂಜ್ಯ **ಶ್ರೀ ಶ್ರೀ ಗಳವರು** ಕ್ಷೇತ್ರಾರ್ಥಿಗಳಿಗೆಲ್ಲ ಹೇಳುವ ನಿತ್ಯ ಪಂಚಾಕ್ಷರಿ ಮಂತ್ರ

6 ಇಂಥ ದಾಸೋಹ ಮಹಿಮೆಯಲ್ಲಿ ನಿಮ್ಮದೂ ಕಾಣಿಕೆ ಸಲ್ಲಿಸಲು ಅವಕಾಶವಿರುತ್ತದೆ.

7 ದಾಸೋಹಕ್ಕೆ ಧನ-ಧಾನ್ಯ ರೂಪದಲ್ಲಿ ಯಥಾಶಕ್ತಿ ಕಾಣಿಕೆ ಅರ್ಪಿಸಿ ಧನ್ಯರಾಗಲು ಇದೊಂದು ಅಪೂರ್ವ ಅವಕಾಶ.

8 ನೀವು ನೀಡುವ ಒಂದು ಸೇರು ಧಾನ್ಯ, ಒಂದು ರೂಪಾಯಿ ಸಾರ್ಥಕ ವಿನಿಯೋಗಕ್ಕೆ ಮೀಸಲಾಗುತ್ತದೆ.

9 ನೀವೂ ದಾಸೋಹದಲ್ಲಿ ಭಾಗಿಗಳಾಗುವ ಪುಣ್ಯ ಸಂಕಲ್ಪ ಇಂದೇ ಮಾಡುತ್ತೀರಾಗಿ **'ಸಿದ್ಧಗಂಗಾ'** ಆಶಿಸುತ್ತದೆ.

# ಸಿದ್ಧಗಂಗಾ

ಸಂಪುಟ-೨೫ ಸಂಚಿಕೆ-೯ ಸೆಪ್ಟಂಬರ್, ೧೯೮೯

## ಶ್ರೀ ಸಿದ್ಧಗಂಗಾ ಗುರುಕರುಣ ತ್ರಿವಿಧಿ

ಮಮ ಮನದಾಳದ ವರಚಿತ್ಕಳೆಯನು ತಂದು
ಕರಸ್ಥಲದೊಳಿಗಿರಿಸಿದ ಶ್ರೀ ಗುರುವೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ಲಿಂಗಾನುಭಾವದ ಜಂಗಮ ಶೀಲವ
ಕಂಗಳಿಗೆ ತೋರಿದ ಶ್ರೀ ಗುರುವೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

* * *

ವಿರತಿ ವೈರಾಗ್ಯಕೆ ಶಿವ ರತ್ನವೆನಿಸಿದೆ
ಅರಸ ಶಿವಯೋಗದ ಶ್ರೀಗುರುವೆ । ಪೊಡಮಡುವೆ
ಸಿದ್ಧಗಂಗಾ ಗುರುವೆ ಕೃಪೆಯಾಗು ॥

–ಹೆಚ್. ವಿ. ವೀರಭದ್ರಯ್ಯ

## ಒಳ ಪುಟಗಳಲ್ಲಿ



## ಶ್ರೀ ವಾಣಿ



ವಿದ್ಯಾರ್ಥಿಗಳು ಅಭ್ಯಾಸ ಮಾಡುತ್ತಾರೆ, ಕಾರ್ಮಿಕರು ಕೆಲಸ ಮಾಡುತ್ತಾರೆ, ಅಧಿಕಾರಿಗಳು ಆಡಳಿತ ನಡೆಸುತಾರೆ, ವರ್ತಕರು ವ್ಯಾಪಾರ ಮಾಡುತ್ತಾರೆ, ರೈತರು ವ್ಯವಸಾಯ ಮಾಡುತ್ತಾರೆ, ಎಲ್ಲರೂ ತಮ್ಮ ತಮ್ಮ ಕ್ಷೇತ್ರದಲ್ಲಿ ಶ್ರದ್ಧೆಯಿಂದ ತೊಡಗಿದಾಗ ಪೂರ್ಣ ಫಲವನ್ನು ಆಶಿಸ ಬಹುದು; ನಿರೀಕ್ಷಿಸಬಹುದು. ಸಂಸ್ಥೆಯಲ್ಲಿ ನಾಲ್ಕು ಸಾವಿರ ವಿದ್ಯಾರ್ಥಿಗಳಿಂದು ಆಶ್ರಯ ಪಡೆದಿದ್ದೀರಿ. ಉದ್ದೇಶ ವಿದ್ಯಾಭ್ಯಾಸ ಮುಂದುವರಿಸುವ ಸಲುವಾಗಿ, ಸಂಸ್ಥೆ ಕೆಲವು ನಿಯಮಗಳನ್ನು ಎಲ್ಲರ ಒಳಿತಿಗಾಗಿ, ಕ್ಷೇಮಕ್ಕಾಗಿ ವಿಧಿಸಿದೆ. ಅದು ಅನಿವಾರ್ಯ ಪ್ರಾರ್ಥನಾ ಸಭೆಗೆ ಹಾಜರಾಗ ಬೇಕೆಂಬುದು ಅಂತಹ ನಿಯಮಗಳಲ್ಲಿ ಒಂದು, ಪ್ರಾರ್ಥನೆ ಅಮೂಲ್ಯ ಶಕ್ತಿಯನ್ನು ಕೊಡುವಂಥದ್ದು. ಇನ್ನೊಬ್ಬರ ಮೆಚ್ಚಿಗೆಗಾಗಿ, ಬಲವಂತಕ್ಕಾಗಿ, ಅಥವಾ ಯಾಂತ್ರಿಕವಾಗಿ ಮಾಡುವ ಪ್ರಾರ್ಥನೆ ಫಲಕೊಡಲಾರದು. "ಜನ ಮೆಚ್ಚಿ ನಡೆಕೊಳ್ಳವುದಕ್ಕಿಂತ ಮನ ಮೆಚ್ಚಿ ನಡೆದುಕೊಳ್ಳುವ" ಪ್ರಯತ್ನ ಮಾಡಬೇಕು. ಕೃತ್ರಿಮ ಆಚರಣೆ ಸಲ್ಲದು, ಹೂವು ಅರಳುವಂತೆ, ನದಿ ಹರಿಯುವಂತೆ, ಹಕ್ಕಿ ಹಾರುವಂತೆ ನೈಜವಾಗಿರ ಬೇಕು ನಾವು ಮಾಡುವ ಪ್ರಾರ್ಥನೆ. ಪ್ರಾರ್ಥನೆ ಮಾಡುವುದು ಫಲಾಪೇಕ್ಷೆಯಿಂದಲ್ಲ, ಚಿತ್ತ ಶುದ್ಧಿಗಾಗಿ. ಸಂಸ್ಥೆಯಲ್ಲಿ ಎಲ್ಲವರ್ಗದ ವಿದ್ಯಾರ್ಥಿಗಳಿದ್ದೀರಿ. ಪ್ರಾಥಮಿಕ ಶಾಲೆ-ಮೊದಲ್ಗೊಂಡು ಕಾಲೇಜಿನವರೆಗೆ ಅಭ್ಯಾಸ ಮಾಡುವವರಿದ್ದೀರಿ. ಮೇಲಿನ ತರಗತಿಗಳಲ್ಲಿ ವ್ಯಾಸಂಗ ನಡೆಸಿರುವವರು ಕೆಳಗಿನ ತರಗತಿಗಳಲ್ಲಿ ಓದುತ್ತಿರುವವರಿಗೆ ಮಾರ್ಗದರ್ಶಕರಾಗಬೇಕು, ಸುಳ್ಳು ಕಾರಣಗಳನ್ನೊಡ್ಡಿ ನಿಯಮಗಳಿಗೆ ಅನುಗುಣವಾಗಿ ನಡೆದು ಕೊಳ್ಳದಿರುವುದು ಆತ್ಮ ವಂಚನೆಯಾಗುತ್ತದೆ. ಪ್ರಾರ್ಥನಾ ಸಭೆಗೆ ಹಾಜರಾತಿ ಕಡ್ಡಾಯ. "ಗಿಡವಾಗಿ ಬಗ್ಗದ್ದು ಮರವಾಗಿ ಬಗ್ಗೀತೆ"? ಎನ್ನುತ್ತದೆ ಅನುಭವ ವಾಣಿ. ಇಂದು ನೀವು ಅನುಸರಿಸುವ ಮಾರ್ಗಗಳು ಮುಂದಿನ ಭವಿಷ್ಯಕ್ಕೆ ದಾರಿದೀಪಗಳಾಗುತ್ತವೆ. ರಾಜ್ಯದ ನಾನಾ ಜಿಲ್ಲೆಗಳಿಂದ ಬಂದಿದ್ದೀರಿ. ತಂದೆ ತಾಯಿಗಳು, ಪೋಷಕರು ತುಂಬಾ ಆಸೆಗಣ್ಣಿನಿಂದ ನಿಮ್ಮ ಜೀವನದ ಉತ್ತಮಿಕೆಗಾಗಿ ಅಪಾರ ತ್ಯಾಗ ಮಾಡುತ್ತಿದ್ದಾರೆ. ಅತ್ತ ನಿಮ್ಮ ಗಮನವಿರಬೇಕು. "ಎಲ್ಲರೊಳಗೊಂದಾಗಿ ಬದುಕುವ" ಕಲೆಯನ್ನು ಕಲಿತುಕೊಳ್ಳಲು ಈ ಸಾಮೂಹಿಕ ಪ್ರಾರ್ಥನೆ ತುಂಬಾ ಸಹಾಯಕ.

(8-8-89 ರ ಪ್ರಾರ್ಥನಾಸಭೆಯಲ್ಲಿ ನೀಡಿದ ಆಶೀರ್ವಚನ)

## ಲೇಖಕರಲ್ಲಿ ಮನವಿ

'ಸಿದ್ಧಗಂಗಾ' ಶ್ರೀ ಸಿದ್ಧಗಂಗಾ ಮಠದಿಂದ ಪ್ರಕಟವಾಗುತ್ತಿರುವ ಮಾಸ ಪತ್ರಿಕೆ. ಶ್ರೀಮಠದ ಹಳೆಯ ವಿದ್ಯಾರ್ಥಿ ಸಂಘದ ಹೆಮ್ಮೆಯ ಸೇವಾ ಪುರವಣಿ; ಮೇಲಾಗಿ ಶ್ರೀಮಠದ ಮುಖವಾಣಿ. ಪೂಜ ಶ್ರೀ ಶ್ರೀ ಡಾ॥ಶಿವಕುಮಾರ ಮಹಾಸ್ವಾಮಿಗಳವರ ದಿವ್ಯ ಮಾರ್ಗದರ್ಶನದಲ್ಲಿ ಮುನ್ನಡೆದಿರುವ ಪತ್ರಿಕೆ, ತ್ರಿವಿಧ ದಾಸೋಹ ಸೇವಾ ತತ್ಪರತೆಯಿಂದ ಹೆಜ್ಜೆ ಹಾಕುತ್ತಿದೆ. ಈ ಧ್ಯೇಯ ಸಾಧನೆಗಾಗಿ ನಾಡಿನ ಗಣ್ಯ ಲೇಖಕರಿಂದ ಸಾಹಿತ್ಯ, ಸಂಸ್ಕೃತಿ, ಧರ್ಮ. ವಿಜ್ಞಾನ, ಶಿಕ್ಷಣ. ಇತಿಹಾಸ, ವೈಚಾರಿಕ, ಚಿಂತನ, ಮುಂತಾದ ಲೇಖನಗಳನ್ನು ಸ್ವಾಗತಿಸುತ್ತದೆ. ಅಸ್ವೀಕೃತ ಲೇಖನಗಳನ್ನು ಪಡೆಯಲು ಸಾಕಷ್ಟು ಅಂಚೆ ಸ್ಟಾಂಪುಗಳನ್ನು ಲಗತ್ತಿಸಿರಬೇಕು. ಲೇಖನಗಳಲ್ಲಿ ಸೂಕ್ತ ಬದಲಾವಣೆ ಮಾಡಿಕೊಳ್ಳುವ ಅಧಿಕಾರ ಸಂಪಾದಕರಿಗಿದೆ. ಅನುವಾದ, ರೂಪಾಂತರ ಲೇಖನಗಳಿಗೆ ಮೂಲ ಕೃತಿಕಾರರ ಅನುಮತಿ ಪಡೆದಿರಬೇಕು. ಸ್ವೀಕೃತ ಲೇಖನಗಳಿಗೆ ಸೂಕ್ತ ಸಂಭಾವನೆ ಕೊಡಲಾಗುವುದು.

# ಶ್ರೀ ಸಿದ್ಧಲಿಂಗೇಶ್ವರ ವಚನ



**ಅನೃತ ಅನಾಚಾರ ಅನ್ಯಹಿಂಸೆ**
**ಪರಧನ ಪರಸ್ತ್ರೀ ಪರನಿಂದ್ಯವ ಬಿಟ್ಟು**
**ಲಿಂಗನಿಷ್ಠೆಯಿಂದ ಶುದ್ಧಾತ್ಮಕನಾಗಿರಬಲ್ಲರೆ**
**ಮಾಹೇಶ್ವರ ಸ್ಥಲ ವಿದೆಂಬೆನಯ್ಯಾ**
**ಮಹಾಲಿಂಗ ಗುರು ಶಿವ ಸಿದ್ದೇಶ್ವರ ಪ್ರಭುವೆ.**

ಸುಳ್ಳು ಹೇಳದಿರುವುದು ಅನಾಚಾರದಲ್ಲಿ ತೊಡಗದಿರುವುದು ಪರಹಿಂಸೆ ಮಾಡದಿರುವುದು ಪರಧನಕ್ಕೆ ಆಶೆಪಡದಿರುವುದು ಪರಸ್ತ್ರೀಯನ್ನು ಬಯುಸದಿರುವುದು ಪರನಿಂದನೆಯನ್ನು ಮಾಡದಿರುವುದು ಲಿಂಗದಲ್ಲಿಮಾತ್ರ ನಿಷ್ಠೆಯುಳ್ಳವನಾಗಿ ತ್ರಿಕರಣ ಶುದ್ಧಿಯಿಂದ ಆತ್ಮನಲ್ಲಿ ವಿರಮಿಸುವುದೇ ಮಾಹೇಶ್ವರಸ್ಥಲಿಯ ಲಕ್ಷಣವೆನ್ನುತ್ತಾರೆ ಶ್ರೀ ಸಿದ್ಧಲಿಂಗೇಶ್ವರರು.

# ಸಂಪಾದಕೀಯ

## ಶಿಕ್ಷಕರ ದಿನಾಚರಣೆ

ಸಮಾಜದ ಸುಸಂಸ್ಕೃತಜೀವಿ ಶಿಕ್ಷಕ. ದೇಶನಿರ್ಮಾಣದಲ್ಲಿ ಮಹತ್ವದ ಪಾತ್ರ ಅವನ ಪಾಲಿಗೆ. ಮಾನವೀಯ ಮೌಲ್ಯಗಳ ಆರಾಧಕಶಿಕ್ಷಕ. ಸದಾ ಮುಗ್ಧ, ಎಳೆಯ ಜೀವಗಳೊಂದಿಗೆ ಅವನ ಒಡನಾಟ. ಯುವ ಜನಾಂಗಕ್ಕೆ ಮಾರ್ಗದರ್ಶನ ಮಾಡುವ ಸದವಕಾಶ ಅವನಿಗೆ. ಬೇರೆಲ್ಲ ವೃತ್ತಿಗಳಿಗಿಂತ ಶಿಕ್ಷಕವೃತ್ತಿ ಪವಿತ್ರವಾದದ್ದು, ಉದಾತ್ತವಾದದ್ದು. ಸಮಾಜಕ್ಕೆ ಕಲಶ ಪ್ರಾಯನಾಗಿ ಶೋಭಿಸುವ ಭಾಗ್ಯವಂತ. ಪ್ರಾಚೀನ ಕಾಲದಿಂದಲೂ ಶಿಕ್ಷಕನಿಗೆ ವಿಶೇಷ ಗೌರವ ಕೊಡುತ್ತಬಂದಿದೆ. ನಮ್ಮ ಸಂಸ್ಕೃತಿ ನಿಜ. ಇವೆಲ್ಲವೂನಿಜ. ಆದರೆ ಇಂದು ಸಮಾಜದ ಕಣ್ಣಿನಲ್ಲಿ ಅತ್ಯಂತ 'ಕನಿಕರದ' ವ್ಯಕ್ತಿ. "ಏನು ಕೆಲಸದಲ್ಲಿದ್ದಾನೆ ಎಂದರೆ ಮೇಷ್ಟ್ರು ಕೆಲಸದಲ್ಲಿ ಎಂದರೆ ಅಯ್ಯೋ ಮೇಷ್ಟ್ರು ಕೆಲಸವೇ ?" ಎಂಬ ಮಾತುಗಳು ಶಿಕ್ಷಕನ ಸ್ಥಾನ ಮಾನದ ಬೆಲೆ ಕಟ್ಟುವಂತಾಗಿವೆ. ರಾಷ್ಟ್ರದ ಆಗು ಹೋಗುಗಳಲ್ಲಿ ಸಕ್ರಿಯವಾಗಿ ಭಾಗಿಯಾಗುವ ಶಿಕ್ಷಕನಿಂದು ಏನಾಗಿದ್ದಾನೆ. ಜನಗಣತಿ ದನಗಣತಿ, ರಾಷ್ಟ್ರೀಯ ಹಬ್ಬಗಳಲ್ಲಿ ಮಕ್ಕಳೊಂದಿಗೆ ಬಿಸಿಲು, ಮಳೆ, ಗಾಳಿಗಳೆನ್ನದೆ ಹಾಜರಾತಿ ಹಾಕುತ್ತಿದ್ದರೂ ಸಲ್ಲುವ ಗೌರವ ಪ್ರಶ್ನಾರ್ಹವಾಗಿದೆ. ಶಿಕ್ಷಕರಿಂದಲೇ ರೂಪಿತರಾಗುವ ಹಲವು ಹನ್ನೊಂದು ಇಲಾಖೆಗಳ ಅಧಿಕಾರಿಗಳಿಗೆ 'ದೊರೆ' ಗಳಿಗೆ ಶಿಕ್ಷಕರ ಬಗ್ಗೆ ಶ್ರೀಮಂತ ಉಪೇಕ್ಷೆ. 'ಅನುತ್ಪಾದಕ'ರೆಂಬ ಬಿರುದು ರಾಜಕಾರಣಿಗಳ ಬಣ್ಣದ ಮಾತುಗಳು, ಇಲಾಖೆಯ ಅಧಿಕಾರಿಗಳ ನಯವಾದ ನಿದಾನ ವಿಧಾನದಿಂದಾಗಿ ಬವಣೆಗೊಳಗಾಗುತ್ತಿರುವ ಶಿಕ್ಷಕರ 'ಪಾಡು' ನಾಯಿ ಪಾಡು ಮಹಿಳಾ ಶಿಕ್ಷಕಿಯರ ಪರಿಸ್ಥಿತಿಯಂತೂ ಶೋಚನೀಯ. ಗ್ರಾಮೀಣ ಪ್ರದೇಶಗಳಲ್ಲಿ ಅವರು ಅನುಭವಿಸುತ್ತಿರುವ ಮಾನಸಿಕ ಹಿಂಸೆ, ಒಮ್ಮೊಮ್ಮೆ ಅನೈತಿಕ ವ್ಯವಹಾರಗಳಿಗೆ ಬಲಿಯಾಗುವುದು ಇತ್ಯಾದಿಯಾಗಿ ಹೇಳತೀರದಷ್ಟು-ಕರ್ತವ್ಯ ಪ್ರಜ್ಞೆಯಿಂದ ದುಡಿಯುತ್ತಿರುವ ಶಿಕ್ಷಕರು ಇಂದೂಲಭ್ಯ, ಕೇವಲ ತಿಂಗಳ ಸಂಬಳಕ್ಕಾಗಿಯಲ್ಲದೆ, ಉಪ್ಪಿನ ಋಣದ ನಿಷ್ಠೆಯುಳಿಸಿ ಕೊಂಡಿರುವ ಶಿಕ್ಷಕರೂ ನಿಜಕ್ಕೂ ಸಮಾಜದ ಕೃತಜ್ಞತೆಗೆ ಪಾತ್ರರು. ಇತ್ತೀಚೆಗೆ ರಾಜಕೀಯಶಿಕ್ಷಕ-ಕ್ಷೇತ್ರಕ್ಕೂ ಹಬ್ಬಿದ್ದು ರಾಷ್ಟ್ರದ ದೃಷ್ಟಿಯಿಂದ ಒಳ್ಳೆಯದಲ್ಲ. ಕೆಟ್ಟರಾಜಕಾರಣಿಯಿಂದ ಆಗುವ ನಷ್ಟಕ್ಕಿಂತ ಕೆಟ್ಟ ಶಿಕ್ಷಕ ರಾಜಕಾರಣಿಯಿಂದ ಆಗುವ ಅನರ್ಥ ಅಪಾರ. ಆತ್ಮವಿಮರ್ಶೆಮಾಡಿಕೊಳ್ಳಲಾಗದ ಶಿಕ್ಷಕನಿಂದ ಸಮಾಜಕಲ್ಯಾಣವಾಗದು. ಶಿಕ್ಷಕನಿಂದು ಕುಡಿತಕ್ಕೊಳಗಾಗಿದ್ದಾನೆ. ಜೂಜಿಗೊಳಗಾಗಿದ್ದಾನೆ. ದುರ್ವ್ಯವಹಾರದಲ್ಲಿ ತೊಡಗಿದ್ದಾ

(9ನೇ ಪುಟ ನೋಡಿ)



# ಯಾವುದು ನಿಜವಾದ ತಪಸ್ಸು

ಅಗ್ನಿ ಮಧ್ಯದಲ್ಲಿ ಬೇಯುವುದು, ನೀರಲ್ಲಿ ಮುಳುಗಿರುವುದು, ಉಪವಾಸ ಮಾಡುವುದು, ಛಳಿ-ಸೆಖೆಗಳನ್ನು ಸಹಿಸುವುದು, ಕೈಮೇಲಕ್ಕೆತ್ತಿ, ನಿಲ್ಲುವುದು, ತಲೆಕೆಳಗಾಗಿ ನಿಲ್ಲುವುದು, ಒಂಟಿಗಾಲಿನಲ್ಲಿ ನಿಲ್ಲುವುದು ಗೆಡ್ಡೆ ಗೆಣಸುಗಳನ್ನು ತಿನ್ನುವುದು, ನದೀ ತೀರದಲ್ಲಿವಾಸಿಸುವುದು, ಪರಿವ್ರಾಜಕನಾಗಿ ಲೋಕ ಪರ್ಯಟನ ಮಾಡುವುದು.

ಅಮಾವಾಸ್ಯೆಯಂದು ಉಪವಾಸ ಮಾಡುವುದು-ಇಂತಹ ತಪಸ್ಸೆಲ್ಲ ತಾಮಸಕರ್ಮ ಇಂತಹ ದೇಹ ದಂಡನೆಯಿಂದ ಯಾವ ಪ್ರಯೋಜನವೂ ಇಲ್ಲ. ದೇವರ ದೇಗುಲವಾದ ದೇಹವನ್ನು ಹಿಂಸೆಗೊಳಗು ಮಾಡುವುದು ಪಾಪಕರ, ಇಂದ್ರಿಯಗಳ ವಶವಾಗಿ ಎತ್ತೆತ್ತಲೋ ಓಡುವ ಮನಸ್ಸಿಗೆ ಕಡಿವಾಣಹಾಕಿ, ಧರ್ಮಜಿಜ್ಞಾಸೆಯತ್ತ ತಿರುಗಿಸ ಬೇಕು, ಭಕ್ತಿಯಿಂದ ಕೂಡಿದಭಗವಂತನ ಸಂಕೀರ್ತನೆಯಲ್ಲಿ ತೊಡಗಿಸಬೇಕು. ಪುಣ್ಯಕರವಾದ ಇಂತಹ ಕಾರ್ಯಗಳು ಸುಲಭವಾಗಿರುವಷ್ಟೆ ಫಲಕಾರಿಯಾಗುತ್ತವೆ. ಮನುಷ್ಯನು ಆಸೆಯನ್ನು ನಾಶಮಾಡಬೇಕೇ ಹೊರತು ದೇಹವನ್ನಲ್ಲ"

ಗುರುನಾನಕ್ ಲೇ
ಶ್ರೀ ತ. ಸು. ಶ್ಯಾಮರಾಯರು-ಪು. 83

---

8ನೇ ಪುಟದಿಂದ

ನೆಂಬುದು ಮುಚ್ಚಿಡುವ ವಿಚಾರವೇನಲ್ಲ. ಎಲ್ಲ ಶಿಕ್ಷಕರೂ ಇಂಥವರೆಂದೇನೂ ಅಲ್ಲ ಆದರೆಜನಾಂಗದ ನಿರ್ಮಾಣ ಮಾಡುವ ಶಿಕ್ಷಕನೇ ಭ್ರಷ್ಟನಾದರೆ ಭವಿಷ್ಯದ ಗುರಿ ಹೇಗೆ ? ಶಿಕ್ಷಕರ ದಿನಾಚರಣೆಯನ್ನು ಡಾಕ್ಟರ್ ಸರ್ವಪಲ್ಲಿ ರಾಧಾಕೃಷ್ಣರವರ ಜನ್ಮದಿನಚಾರಣೆಯನ್ನಾಗಿ ಆಚರಿಸುವ ಸಂದರ್ಭದಲ್ಲಿ ಸ್ವವಿಮರ್ಶೆ ಎಲ್ಲರಿಗೂ ಬೇಕು. ದೊಡ್ಡವರ ಹೆಸರಿಗೆ ಅಗೌರವ ಬಾರದಂತೆ ನಡೆದುಕೊಳ್ಳಬೇಕು. ಅದು ನಿಜವಾದ ಆಚರಣೆ. ಬದಲಾಗಿ ಆಚರಣೆಯ ದಿನ ಒಂದು ಶಾಲು ಹೊದಿಸಿ, ಹಾರಹಾಕಿ ಬಾಯ್ತುಂಬಾ ಹೊಗಳಿದ ಮಾತ್ರಕ್ಕೆ ಶಿಕ್ಷಕನ ಉದ್ಧಾರವಾಗಲಾರದು. ಅವನ ಅಗತ್ಯಗಳನ್ನು ಅರಿತು, ಅವುಗಳನ್ನು ಪೂರೈಸುವ ಕ್ರಿಯಾವಂತಿಕೆ ಅಗತ್ಯ. ಶಾಲೆಯಿಲ್ಲದ, ಶಿಕ್ಷಕರಿಗೆ ವಸತಿಯಿಲ್ಲದ, ನಾಲ್ಕು ತರಗತಿಗಳಿಗೆ ಒಬ್ಬನೇ ಶಿಕ್ಷಕನಿರುವ ಶಾಲೆಗಳಿರುವ ಪರಿಸ್ಥಿಯನ್ನು ಸುಧಾರಿಸುವ ಕಾರ್ಯ ಮೊದಲಾಗಬೇಕು. ಶಿಕ್ಷಕನೂ ತನ್ನ ಸ್ಥಾನದ ಮಾನವನ್ನು ಕಾಪಾಡಿಕೊಂಡು ಬರುವ ಆತ್ಮಜಾಗೃತಿಯುಳ್ಳವನಾಗ ಬೇಕು ಅಂತಹ ಸಂಕಲ್ಪಮಾಡುವ ದಿನವಾಗಬೇಕು ಶಿಕ್ಷಕರ ದಿನಾಚರಣೆ.

# ಮಾತು ಜ್ಯೋತಿ

ಬೊಂಬೆಗೆ ನಿರಾಳದ ಗೆಜ್ಜೆಯ ಕಟ್ಟಿ
ಬಯಲ ಬೊಂಬೆಯ ಕೈಯಲ್ಲಿ ಕೊಟ್ಟು ಮುದ್ದಾಡಿಸುತ್ತಿರ್ದನಯ್ಯಾ
ಕರ್ಪೂರದ ಪುತ್ಥಳಿಗೆ ಅಗ್ನಿಯ ಸಿಂಹಾಸನವನಿಕ್ಕಿ
ಅಗ್ನಿಕರಗಿ ಕರ್ಪೂರ ಉಳಿದುದಕ್ಕೆ ಬೆರಗಾದೆನಯ್ಯಾ
ಎನ್ನ ಅಜಗಣ್ಣನ ಯೋಗಕ್ಕೆ.

ನಿರಾಕಾರವಾದಕ್ಕೆ ಇಲ್ಲಿ ಆಕಾರದಾನವಾಗಿದೆ ದೇಹ ಅನಿತ್ಯವಾದದ್ದು. ಆದ್ದರಿಂದ ಅದು ನೀರಬೊಂಬೆ ಆಗಬಹುದು. ಆದರೆ ಆ ದೇಹವೇ ಶೂನ್ಯ ಸಂಪಾದನೆಗೆ ಆತ್ಮಜ್ಞಾನಕ್ಕೆ ಅವಕಾಶ ಮಾಡಿಕೊಟ್ಟದ್ದು. ಆದ್ದರಿಂದ ಅದಕ್ಕೂ ದಿವ್ಯತೆಯ ಸ್ಪರ್ಶವಾಗಿದೆ. ಅಂಗವೇ ತಾನೆ ಲಿಂಗವಾದದ್ದು. ಆದ್ದರಿಂದ ಅದಕ್ಕೆ ನಿರಾಳದ ಗೆಜ್ಜೆಯನ್ನು ಅಜಗಣ್ಣ ಕಟ್ಟಿದ ಎಂದು ಮುಕ್ತಾಯಕ್ಕ ಹೇಳುತ್ತಿದ್ದಾಳೆ. ಈಗ ಅಂಥ ದೇಹ ಅವಸಾನವಾಗಿದೆ. ಅದನ್ನು ಬಯಲಿಗೆ ಎಂದರೆ ಪರಬ್ರಹ್ಮಕ್ಕೆ ಅರ್ಪಿಸಿದ್ದಾಯಿತು. ಆ ಅರ್ಪಿಸಿದ ಕ್ರಿಯೆಯನ್ನು ಮುಕ್ತಾಯಕ್ಕೆ ಎಷ್ಟು ಸೊಗಸಾಗಿ ಹೇಳುತ್ತಿದ್ದಾಳೆ? 'ಬಯಲ ಬೊಂಬೆಯ ಕೈಯಲ್ಲಿ ಕೊಟ್ಟು ಮುದ್ದಾಡಿಸುತ್ತಿರ್ದನಯ್ಯಾ' ಆ ಬಯಲು ಬೊಂಬೆ ಈ ನೀರ ಬೊಂಬೆಯನ್ನು ಹಿಡಿದು ಆಟವಾಡುತ್ತಿದೆ. ನಿರಾಳದ ಗೆಜ್ಜೆ ಘಲು ಘಲಿಸುತ್ತಿದೆ. ಈ ಸ್ಥಿತಿಯನ್ನು ಮನಸ್ಸಿಗೆ ಮುಟ್ಟಿಸುವ ಮತ್ತೊಂದು ರೂಪಕವೂ ಉಂಟು. ಕರ್ಪೂರದ ಪ್ರತಿಮೆ. ಅದಕ್ಕೆ ಜ್ಞಾನದ ಅಗ್ನಿಯ ಸಿಂಹಾಸನ. ಈಗ ಒಂದು ವಿಚಿತ್ರ ನಡೆದಿದೆ. ಅಗ್ನಿಕರಗಿ ಹೋಗಿದೆ. ಕರ್ಪೂರದ ಗೊಂಬೆ ಉಳಿದಿದೆ. ಮುಕ್ತಾಯಕ್ಕನ ಮನಸ್ಸನ್ನು ಜ್ಞಾನ ತುಂಬ ಬೇಕು. ಅಲ್ಲಿಂದ ಅಜಗಣ್ಣನ ನೆನಪು ಅಳಿಯಬೇಕು. ಅದು ಜ್ಞಾನಿಯಾದವಳ ಲಕ್ಷಣ ಆದರೆ ಹಾಗಾಗಿಲ್ಲ. ಅವಳಲ್ಲಿ ಅಣ್ಣನ ವಿಷಯಕ್ಕೆ ಮೋಹ ಉಳಿದಿದೆ. ಅವನು ಯೋಗಿಯಾದ್ದರಿಂದ, ತನ್ನನ್ನು ಯೋಗದ ಬೆಳಕಿನಲ್ಲಿ ನಡೆಸುತ್ತಾ ಇದ್ದದರಿಂದ ಆ ಮೋಹ ಇನ್ನೂ ದಟ್ಟವಾಗಿದೆ. ಪುಣ್ಯದ ವಿಷಯವೆಂದರೆ ತನಗೆ ಅಂಥ ಮೋಹ ಉಂಟು ಎಂಬ ಅರಿವೂ ಅವಳಿಗೆ ಇದೆ. ಆದ್ದರಿಂದಲೇ ಅಗ್ನಿ ಕರಗಿತು, ಕರ್ಪೂರದ ಗೊಂಬೆ ಉಳಿಯಿತು ಎಂಬುದು ಅವಳ ಅನುಭವ. ಅವಳ ಅನುಭವಕ್ಕೆ ಅವಳು ಮಾತನ್ನು ಕೊಟ್ಟ ರೀತಿ ಅದು.

ಆಧಾರ–ವಿಶ್ವಕನ್ನಡ-೨ ಪುಟ. 165

ಸಿದ್ಧಗಂಗಾ — ಡಾ|| ಪ್ರಭುಶಂಕರ.





ಕೃಷಿ ವಿಭಾಗ:

# ಕೃಷಿ ಬೆಳವಣಿಗೆಯಲ್ಲಿ ಗೊಬ್ಬರಗಳ ಪಾತ್ರ

ಡಿ. ವೆಂಕಟರಾವ್, ಎಂ. ಎ.
ಪ್ರಾಂಶುಪಾಲರು, ಸರ್ಕಾರಿ ಉನ್ನತದರ್ಜೆ ಕಾಲೇಜು, ಹಾಸನ.

ರಾಸಾಯನಿಕ ಗೊಬ್ಬರಗಳ ಬಗೆಗೆ ನಮ್ಮ ದೇಶದಲ್ಲಿ ಇಂದಿಗೂ ಅಲ್ಲಲ್ಲಿ ಅಪನಂಬಿಕೆಯ ನುಡಿಗಳು ಕೇಳಿ ಬರುವುದುಂಟು, ಇವುಗಳ ಬಳಕೆಯಿಂದ ಭೂಮಿ ಹಾಳಾಗಿ ಬೆಳೆಸುಟ್ಟು ಹೋಗುತ್ತದೆ ಎಂದು ಕೆಲವರು ಭಾವಿಸಿದ್ದಾರೆ. ಆದರೆ ಇತಿಮಿತಿ, ಪ್ರಯೋಜನಗಳನ್ನು ಅರಿತು ಸಮಯೋಚಿತವಾಗಿ ಉಪಯೋಗಿಸಿದಲ್ಲಿ ಭೂಮಿ ಹಾಳಾಗುವ ಬದಲು ರೈತರಪಾಲಿಗೆ ಭಾಗ್ಯಲಕ್ಷ್ಮಿಯಾಗಿ ಪರಿಣಯಿಸುವುದರಲ್ಲಿ ಸಂದೇಹವಿಲ್ಲ. ಭೂಮಿ ಚೆಳೆಗಳಿಗೆ ಆಧಾರವೇ ಹೊರತು ಆಹಾರವಲ್ಲ. ಆಹಾರ ರಾಸಾಯನಿಕ ಗೊಬ್ಬರಗಳ ರೂಪದಲ್ಲಿರುತ್ತದೆ. ಅವುಗಳ ಬಳಕೆ ಉತ್ಪಾದನಾಸಾಮರ್ಥ್ಯವನ್ನು ಇಮ್ಮಡಿಗೊಳಿಸುತ್ತದೆ. ಇತ್ತೀಚಿನ ಸಂಶೋಧನೆಗಳಿಂದ ರಾಸಾಯನಿಕ ಗೊಬ್ಬರವನ್ನು ಭೂಮಿಗೆ ಹಾಕುವುದರ ಜೊತೆಗೆ ಎಲೆಗಳ ಮೇಲೆ ಸಿಂಪಡಿಸಿದರೆ ಉತ್ಪತ್ತಿದ್ವಿಗುಣವಾಗುವುದೆಂದು ತಿಳಿದು ಬಂದಿದೆ. ಅಧಿಕ ಇಳುವರಿ ಬೆಳೆಗಳಿಂದ ಗರಿಷ್ಠ ಪ್ರಯೋಜನ ಪಡೆಯಬೇಕಾದರೆ ಅದು ರಾಸಾಯನಿಕ ಗೊಬ್ಬರಗಳಿಂದ ಮಾತ್ರ ಸಾಧ್ಯ. ರಾಸಾಯನಿಕ ಗೊಬ್ಬರಗಳು ಹೆಚ್ಚಿನ ಪ್ರಮಾಣದಲ್ಲಿ ಸಸ್ಯ ಪೋಷಕಾಂಶಗಳನ್ನು ಹೊಂದಿವೆ. ಕೊರತೆಯಿಂದ ಸಸ್ಯ ಪೋಷಕಾಂಶಗಳನ್ನು ಇವುಗಳಿಂದ ತುಂಬಿಸಿಕೊಳ್ಳಬಹುದಲ್ಲದೆ, ಇವುಗಳನ್ನು ತೀಕ್ಷ್ಣಗೊಳಿಸುವುದರ ಮೂಲಕ ಪರಿಮಾಣವನ್ನು ಕಡಿಮೆ ಮಾಡಬಹುದು. ಇದರಿಂದ ಸಾಗಾಟ, ಬಳಕೆಗಳಲ್ಲಿ ಮಿತವ್ಯಯ ಸಾಧಿಸುವುದರೊಂದಿಗೆ ಶ್ರಮವೂ ಕಡಿಮೆಯಾಗುತ್ತದೆ. ರಾಸಾಯನಿಕ ಗೊಬ್ಬರಗಳಿಗೆ ಬೆಲೆ ಹೆಚ್ಚೆನಿಸಿದರೂ ಸಸ್ಯ ಪೋಷಕಾಂಶಗಳು ಹಾಗೂ ಇವುಗಳ ಬಳಕೆಯಿಂದ ಹೆಚ್ಚುವ ಇಳುವರಿ ಪ್ರಮಾಣಗಳನ್ನು ದೃಷ್ಟಿಯಲ್ಲಿಟ್ಟು ಕೊಂಡು ನಾಡಗೊಬ್ಬರಗಳಿಗೆ ಹೋಲಿಸಿ ನೋಡಿದಲ್ಲಿ ಈ ಬೆಲೆ ಅಧಿಕವೇನೂ ಅಲ್ಲ. ಕೃಷಿಯಲ್ಲಿ ಮುಂದುವರಿದ ಅನೇಕ ರಾಷ್ಟ್ರಗಳು ಭೂಮಿಗೆ ಕೇವಲ ರಾಸಾಯನಿಕ ಗೊಬ್ಬರಗಳನ್ನೇ ಕೊಟ್ಟು ಹೆಚ್ಚು ಇಳುವರಿ ಪಡೆಯುತ್ತವೆ. ಇದರಿಂದ ಪ್ರತಿವರ್ಷವೂ ಭೂಮಿಯಲ್ಲಿ ಸೇಂದ್ರೀಯ ಪದಾರ್ಥದ

ಪ್ರಮಾಣ ಹೆಚ್ಚಾಗಿ ಭೂಮಿಯ ಫಲವತ್ತತೆಯೂ ಹೆಚ್ಚಾಗುತ್ತದೆ. ಪ್ರತಿವರ್ಷವೂ ಹುಲುಸಾಗಿ ಬೆಳೆ ಬರುವುದರಿಂದ ಬೇರು ಉದುರಿ ಬಿದ್ದ ಎಲೆಗಳು ಪುನಃ ಭೂಮಿಗೆ ಸೇರಿ ಹಲವುಗಾಡಿ ಸೇಂದ್ರೀಯ ಗೊಬ್ಬರ ಕೊಟ್ಟಂತಾಗುತ್ತದೆ. ಹೀಗೆ ರಾಸಾಯನಿಕ ಗೊಬ್ಬರವನ್ನು ಸಮತೋಲವಾಗಿ ಬಳಸಿದರೆ ಬೆಳೆಯ ಬೇರು ಭೂಮಿಯಲ್ಲಿ ಚೆನ್ನಾಗಿ ನಾಟಿ ಭೂಸತ್ವ ಹೆಚ್ಚುವುದರ ಜೊತೆಗೆ ಧಾನ್ಯ, ಧಾನ್ಯದ ಕಡ್ಡಿ, ಹುಲ್ಲು, ಬೇರುಗಳು- ಕಾಂಡ, ಎಲೆಗಳೂ ಹೆಚ್ಚುತ್ತವೆ. ಜಾನುವಾರುಗಳಿಗೆ ಆಹಾರವೂ ಸಮೃದ್ಧವಾಗಿ ದೊರೆಯುತ್ತದೆ. ತತ್ವಲವಾಗಿ ಸಗಣಿಯೂ ಹೆಚ್ಚು ಸಿಗುತ್ತದೆ. ಹೀಗೆ ರಾಸಾಯನಿಕ ಗೊಬ್ಬರಗಳು ಮಣ್ಣಿನಲ್ಲಿ ಇಂದ್ರ ಜಾಲವನ್ನೇ ಮಾಡುತ್ತವೆ.

ರಾಸಾಯನಿಕ ಗೊಬ್ಬರಗಳಿಂದ ಅಧಿಕ ಇಳುವರಿ ಪಡೆಯಬೇಕಾದರೆ ಕೆಳಗಿನ ವಿಚಾರಗಳನ್ನು ಮುಖ್ಯವಾಗಿ ಗಣನೆಗೆ ತೆಗೆದುಕೊಳ್ಳಬೇಕಾಗುತ್ತದೆ.

**1. ನೀರಾವರಿ.**

ಖುಷ್ಕಿ ಬೆಳೆಗಿಂತಲೂ ನೀರಾವರಿ ಬೆಳೆಗೆ ರಾಸಾಯನಿಕಗೊಬ್ಬರಗಳನ್ನು ಹಾಕಿದಲ್ಲಿ ಹೆಚ್ಚು ಫಸಲುಸಿಗುತ್ತದೆ. ಮಳೆ ಆಶ್ರಯದಿಂದ ಬೆಳೆಯುವ ಬೆಳೆಗಳಿಗೆ ಹೊಲದಲ್ಲಿ ಸಾಕಷ್ಟು ತೇವ ಇರುವಾಗ ಮಾತ್ರ ರಾಸಾಯನಿಕ ಗೊಬ್ಬರಗಳನ್ನು ಬಳಸಬೇಕು. ರಾಸಾಯನಿಕ ಗೊಬ್ಬರಗಳ ಬಳಕೆಯಿಂದ ಹುಳ ಹುಪ್ಪಟೆ ಹಾಗೂ ರೋಗಗಳ ಹಾವಳಿ ಹೆಚ್ಚಬಹುದು. ಆದ್ದರಿಂದ ಇವುಗಳನಿವಾರಣೆಗೆ ತಕ್ಕ ಬೆಳೆ ಸಂರಕ್ಷಣೆಯ ಕ್ರಮವನ್ನು ಅನುಸರಿಸಬೇಕು.

ನೀರಿನ ಉಸ್ತುವಾರಿ ಚನ್ನಾಗಿರಬೇಕು. ನೀರಿನ ವಿತರಣೆ ಸಮನಾಗಿರುವಂತೆ ನೋಡಿಕೊಳ್ಳುವುದರ ಜೊತೆಗೆ ಮಣ್ಣಿನ ಸವಕಳಿಯನ್ನು ತಡೆಗಟ್ಟಲು ಸೂಕ್ತ ವ್ಯವಸ್ಥೆ ಅಗತ್ಯ. ಹೆಚ್ಚಾದ ನೀರು ಹರಿದು ಹೋಗಲು ಯೋಗ್ಯಕಾಲುವೆಗಳಿರಬೇಕಾದುದು ಅವಶ್ಯ.

ಬೆಳೆಯುವ ಬೆಳೆಯನ್ನು ಮತ್ತು ಬೆಳೆಯ ತಳಿಯನ್ನು ಹೊಂದಿಕೊಂಡು ರಾಸಾಯನಿಕಗೊಬ್ಬರಗಳ ಪರಿಮಾಣವನ್ನು ಹೆಚ್ಚು ಅಥವಾ ಕಡಿಮೆ ಮಾಡಬೇಕಾಗುತ್ತದೆ. ಐ. ಆರ್. 8. ಜಯ ಮುಂತಾದ ಅಧಿಕ ಉತ್ಪಾದನೆಯ ತಳಿಗಳಿಗೆ ಸ್ಥಳೀಯ ತಳಿಗಳಿಗಿಂತಲೂ ಹೆಚ್ಚಿನ ಪ್ರಮಾಣದಲ್ಲಿ ಸಾರಜನಕದ ಅವಶ್ಯಕತೆ ಇದೆ. ಆಯಾ ಗೊಬ್ಬರದಲ್ಲಿರುವ ಮುಖ್ಯ ಪೋಷಕದ ಶೇ. ಅಂಶವನ್ನು ಅವಲಂಬಿಸಿ ಬೆಳೆಗೆ ಕೊಡಬೇಕಾದ ಗೊಬ್ಬರದ ಪ್ರಮಾಣವನ್ನು ನಿಶ್ಚಯಿಸಬೇಕಾಗುತ್ತದೆ.



ರಾಸಾಯನಿಕ ಗೊಬ್ಬರಗಳನ್ನು ಮಣ್ಣಿನ ಸ್ವಭಾವಕ್ಕೆ ಅನುಗುಣವಾಗಿ ಬಳಸುವುದು ಉತ್ತಮ. ಏಕೆಂದರೆ ಹೊಲದಿಂದ ಹೊಲಕ್ಕೆ ಮಣ್ಣಿನಲ್ಲಿ ವ್ಯತ್ಯಾಸ ಇರುವುದುಂಟು.

ಬೆಳೆಯ ಯೋಗ್ಯ ಹಂತದಲ್ಲಿ ರಾಸಾಯನಿಕ ಗೊಬ್ಬರವನ್ನು ಭೂಮಿಗೆ ಕೊಡಬೇಕು. ಏಕೆಂದರೆ ತಕ್ಕಸಮಯದಲ್ಲಿಕೊಡುವ ಬದಲು ಇತರ ಸಮಯದಲ್ಲಿ ಗೊಬ್ಬರ ಬಳಸಿದರೆ ಉತ್ತಮ ಪ್ರತಿಫಲ ದೊರೆಯುವುದಿಲ್ಲ.

ರಾಸಾಯನಿಕ ಗೊಬ್ಬರಗಳನ್ನು ಬೆಳೆಗಳಿಗೆ ಹಲವು ವಿಧಾನಗಳಿಂದ ನೀಡಬಹುದು. ಸಮವಾಗಿ ವಿತರಣೆಯಾಗುವಂತೆ ಚೆಲ್ಲುವುದು, ಕೂರಿಗೆಯಿಂದ ಹಾಕುವುದು, ನೇಗಿಲಿನ ಸಾಲಿನಲ್ಲಿ ಗೊಬ್ಬರವನ್ನು ಚೆಲ್ಲುತ್ತಾ ಹೋಗುವುದು. ರಾಸಾಯನಿಕ ಗೊಬ್ಬರವನ್ನು ಸೇರಿಸಿದ ಸಗಣಿಗೊಬ್ಬರದ ದ್ರಾವಣವನ್ನು ತಯಾರಿಸಿ ಬೇರುಗಳನ್ನು ಅದ್ದುವುದು. ತೆಳುವಾದ ದ್ರಾವಣ ತಯಾರಿಸಿ ಸಿಂಪರಣೆ ಮಾಡುವುದು, ಗಿಡಗಳ ಸುತ್ತಲೂ ವೃತ್ತಾಕಾರದಲ್ಲಿ ಗೊಬ್ಬರ ಹಾಕುವುದು ಮುಂತಾದಕ್ರಮಗಳನ್ನು ಉಪಯೋಗಿಸುವುದು ಅಗತ್ಯ.

ಹವೆ, ಕಳೆಗಳನಿವಾರಣೆ, ಬೆಳೆಪರಿವರ್ತನೆ, ಬೀಜಪ್ರಮಾಣ, ಸಾಲಿನಿಂದ ಸಾಲಿಗೆ ಬೀಜದಿಂದ ಬೀಜಕ್ಕೆ ಇರುವ ಅಂತರ ಹಾಗೂ ಇತರ ಕೃಷಿಕ್ರಮಗಳು ಕೂಡ ರಾಸಾಯನಿಕ ಗೊಬ್ಬರಗಳಿಂದ ದೊರೆಯುವ ಪ್ರತಿಫಲದ ಪರಿಮಾಣವನ್ನು ನಿಶ್ಚಯಿಸುತ್ತವೆ.

**ಭಾರತದ ರಾಸಾಯನಿಕ ಗೊಬ್ಬರ ಉದ್ಯಮ:—**

ಮಾನವ ಚರಿತ್ರೆಯಷ್ಟೇ ಪುರಾತನವಾದ ಕೃಷಿಯು ಕೆಲವು ವರ್ಷಗಳ ಹಿಂದಿನವರೆಗೆ ಭೂಮಿಯ ಫಲವತ್ತತೆಯನ್ನು ಮಾತ್ರ ಅವಲಂಬಿಸಿತ್ತು. ಪ್ರತಿ ವರ್ಷವೂ ಬೆಳೆತೆಗೆಯುವಾಗ ಹೆಚ್ಚಿನ ಪ್ರಮಾಣದ ಪೋಷಕಾಂಶಗಳು ಮಣ್ಣಿನಿಂದ ಹೀರಲ್ಪಟ್ಟು ಇವುಗಳ ಮರುಸೇರಿಕೆ ತ್ವರಿತವಾಗಿ ನಡೆಯದೆ ಮುಂದೊಂದುದಿನ ಭೂಮಿಯು ನಿಸ್ಸಾರವಾಗಿ ಸಸ್ಯಗಳ ಬೆಳೆವಣಿಗೆಗೆ ನಿರುಪಯುಕ್ತವಾಗ ಬಹುದೆನ್ನುವ ಭಯಕಾಡಿಸುತ್ತಲೇ ಇತ್ತು. ರಾಸಾಯನಿಕ ಗೊಬ್ಬರಗಳ ಆವಿಷ್ಕಾರದಿಂದ ಈ ಭಯ ದೂರವಾಯಿತು. ಸಸ್ಯಗಳಬೆಳವಣಿಗೆಗೆ ಅಗತ್ಯವಿರುವ ವಸ್ತುಗಳನ್ನು ನೇರವಾಗಿ, ಸುಲಭವಾಗಿ ಒದಗಿಸಲು ಇದರಿಂದ ಸಾಧ್ಯವಿರುವುದರಿಂದ ಮುಂದೆ ಎಂದೆಂದೂ ಭೂಮಿಯ ಫಲವತ್ತತೆಯ ಕೊರತೆಗೆ ಹೆದರುವ ಅಗತ್ಯವಿಲ್ಲ ಎಂಬ ಆತ್ಮವಿಶ್ವಾಸ ಮೂಡಿತು. ಆದರೆ ಶತಮಾನದ ಆದಿಭಾಗದಲ್ಲಿ ಬಹುಪಾಲು ರೈತರು ಈ ಗೊಬ್ಬರ

ಗಳನ್ನು ಬೆಳೆಗೆ ವಿಪುಲವಾಗಿ ಕೊಡಲು ಹಿಂಜರಿಯುತ್ತಿದ್ದರು. ಕಾರಣ ರಾಸಾಯ
ನಿಕ ವಸ್ತುಗಳ ಸತತವಾದ ಬಳಕೆ ಮಣ್ಣಿನ ಗುಣಲಕ್ಷಣಗಳ ಮೇಲೆ ವಿರೋಧ
ಪರಿಣಾಮ ಬೀರಬಹುದೆನ್ನುವ ಭಯ. ಆದರೆ ಕಳೆದ 30-40 ವರ್ಷಗಳಲ್ಲಿ ನಡೆದ
ಪ್ರಯೋಗಗಳು ಹಾಗೂ ರೈತರ ಮನ ಒಲಿಸುವ ಸರಕಾರದ ಪ್ರಯತ್ನಗಳಿಂದಾಗಿ
ಇಂದು ಗೊಬ್ಬರದ ಬಳಕೆ ಹೆಚ್ಚಿದ್ದು, ಸಾಮಾನ್ಯವಾಗಿ ಪ್ರತಿಯೊಬ್ಬ ರೈತನೂ ಅದರ
ಫಲಿತಾಂಶದ ಬಗ್ಗೆ ನಿಶ್ಚಿಂತನಾಗಿದ್ದಾನೆ. ಭಾರತದಲ್ಲಿ ಪ್ರತಿವರ್ಷವೂ ರಾಸಾಯನಿಕ
ಗೊಬ್ಬರಗಳ ಬಳಕೆ ಹೆಚುತ್ತಾ ಬಂದಿದ್ದು ಇತ್ತೀಚೆಗೆ ಅವುಗಳ ಬಳಕೆ ಮತ್ತು ಉದ್ಯಮ
ಗಳು ಹಲವಾರು ಪಟ್ಟು ಹೆಚ್ಚಿವೆ. ಸ್ವಾತಂತ್ರ್ಯದ ಮೊದಲೇ ರಾಸಾಯನಿಕ ಗೊಬ್ಬರಗಳ
ಉತ್ಪಾದನಾ ಕೈಗಾರಿಕೆಗಳನ್ನು ನಮ್ಮದೇಶದಲ್ಲಿ ಆರಂಭಿಸಲಾಗಿದ್ದರೂ ಅದರ ಯೋಜಿತ
ವಿಸ್ತರಣೆ1950ರಿಂದ ಪ್ರಾರಂಭವಾಯಿತು. 1950ರದಶಕದಲ್ಲಿ ರಾಸಾಯನಿಕ ಗೊಬ್ಬರ
ರೈತರ ಹೊಲಗದ್ದೆಗಳಿಗೆ ಹರಿಯಲ್ಪಟ್ಟದ್ದೇ ತಡ, ರೈತರ ಕಣ್ಣುಗಳೂ ತೆರೆದವು.
ಕೆಲವೇ ವರ್ಷಗಳ ಹಿಂದೆ ಗೊಬ್ಬರಗಳನ್ನು ಬಳಸಲು ಹಿಂದೆಗೆಯುತ್ತಿದ್ದ ಅವರು
ಈಗ ಡಿಪೋಗಳಲ್ಲಿ ಅವುಗಳ ಖರೀದಿಗಾಗಿ ಸಾಲು ಸಾಲು ನಿಲ್ಲಲಾರಂಬಿಸಿದ್ದಾರೆ.
ಇದರಿಂದಾಗಿ ಅದುವರೆಗೂ ನಿರಂತರವಾದ ನಿರ್ಲಕ್ಷ್ಯದಿಂದಾಗಿ ಕ್ಷೀಣವಾಗುತ್ತಾ
ಹೋಗುತ್ತಿದ್ದ ಮಣ್ಣಿನ ಫಲವತ್ತತೆಗೆ ಜೀವ ದೊರೆಯಲಾರಂಬಿಸಿತು.

ಭಾರತ ಸ್ವಾತಂತ್ರ್ಯ ಪಡೆದನಂತರ ಸ್ಥಾಪಿಸಿದ ಸಾರ್ವಜನಿಕ ಸಂಸ್ಥೆಗಳಲ್ಲಿ
ಸಿಂಧ್ರಿ ಗೊಬ್ಬರ ಕಾರ್ಖಾನೆ ಮೊದಲನೆಯದು. ಇದು ಇಡೀ ಏಷ್ಯಾದಲ್ಲೇ
ಅತ್ಯಂತ ದೊಡ್ಡದಾದ ಹಾಗೂ ಬಹು ಮುಖ್ಯವಾದ ಆಧುನಿಕ ಕಾರ್ಖಾನೆ.
28ಕೋಟಿರೂಗಳನ್ನು ವೆಚ್ಚಮಾಡಿ 1950ರಲ್ಲಿ ಸ್ಥಾಪಿಸಲಾದ ಈ ಕಾರ್ಖಾನೆ
1951ರಲ್ಲಿ ಉತ್ಪಾದನಾ ಕಾರ್ಯವನ್ನು ಆರಂಭಿಸಿತು. 1950ರಲ್ಲಿ ಭಾರತದಲ್ಲಿದ್ದುದು
ಕೇವಲ ಮೂರು ಕಾರ್ಖಾನೆಗಳು. ಅವು ಯಾವುವೆಂದರೆ ಫರ್ಟಿ ಲೈಸರ್ಸ್ ಅಂಡ್
ಕೆಮಿಕಲ್ಸ್, ಅಲ್ವೇ ಸಿಂಧ್ರಿ ಕೆಮಿಕಲ್ ಅಂಡ್ ಫರ್ಟಿಲೈಸರ್ಸ್, ಸಿಂಧ್ರಿ,
ಮೈಸೂರು ಕೆಮಿಕಲ್ಸ ಅಂಡ್ ಫರ್ಟಿಲೈಸರ್ಸ್, ಬೆಳಗೊಳ. ಈ ಮೂರು ಮುಖ್ಯ
ಕಾರ್ಖಾನೆಗಳೇ ಅಲ್ಲದೆ ನಾಮರೂಪ, ನಾನ್‌ಗಲ್, ಟ್ರೋಂಬೆ, ಗೋರಖ್‌ಪುರ
ಮುಂತಾದ ಸಣ್ಣ ಕಾರ್ಖಾನೆಗಳೂ ಸರಕಾರಿ ಕ್ಷೇತ್ರದಲ್ಲಿ ಪ್ರಾರಂಭವಾದವು. ಇದ
ರೊಂದಿಗೆ ಖಾಸಗೀ ಕ್ಷೇತ್ರಗಳಿಗೂ ರಾಸಾಯನಿಕ ಗೊಬ್ಬರ ಉತ್ಪಾದನೆಗಾಗಿ
ಪರವಾನಗಿ ನೀಡಲಾಯಿತು. ಸರಕಾರಿ ಮತ್ತು ಖಾಸಗೀಕ್ಷೇತ್ರದ ಕಾರ್ಖಾನೆಗಳು
ಗೊಬ್ಬರ ಉತ್ಪಾದನೆಯನ್ನು ಹೆಚ್ಚಿಸಲು ತೀವ್ರಗತಿಯ ಚಳುವಳಿಯನ್ನು ಪ್ರಾರಂಭಿಸಿ
ದುವು. ಹೀಗೆ ಬೆಳೆದ ಗೊಬ್ಬರ ತಯಾರಿಕೆಯ ಉದ್ಯಮ ಇಂದು ಬೃಹದ್ಗಾತ್ರವನ್ನು
ತಳೆದು ಆಮದನ್ನು ನಿಯಂತ್ರಣದಲ್ಲಿಡಲು ಸಹಾಯಕವಾಗುತ್ತಿದೆ. ಅಂದಿನಿಂದ
ಇಂದಿನವರೆಗೂ ಗೊಬ್ಬರದ ಉತ್ಪಾದನೆ ಹೆಚ್ಚುತ್ತಲೇ ಬಂದಿದೆ. ಇಂದು ದೇಶದಲ್ಲಿ



ಸರಕಾರಿವಿಭಾಗದ ವರ್ಗದಲ್ಲಿ 6 ಕಾರ್ಖಾನೆಗಳು, ಖಾಸಗಿ ವಿಭಾಗದಲ್ಲಿ 3ಕಾರ್ಖಾನೆ
ಗಳು ಒಟ್ಟಿಗೆ ವರ್ಷಕ್ಕೆ 681000 ಟನ್ ರಾಸಾಯನಿಕ ಗೊಬ್ಬರಗಳನ್ನು ಉತ್ಪಾ
ದಿಸಲು ಶಕ್ತವಾಗಿವೆ. ಸಿಂದ್ರಿಗೊಬ್ಬರ ಕಾರ್ಖಾನೆಯು ದಿನಕ್ಕೆ 1ಸಾವಿರ
ಟನ್ ಗೊಬ್ಬರವನ್ನು ಉತ್ಪಾದಿಸುತ್ತದೆ. 1951-52 ರಲ್ಲಿ ಈ ಕಾರ್ಖಾನೆ 34,
800 ಟನ್‌ಗಳಷ್ಟು ಅಮೋನಿಯಂ ಸಲ್ಫೇಟನ್ನು ಉತ್ಪಾದಿಸಿತು. 1958-59 ರಲ್ಲಿ
ಈ ಪ್ರಮಾಣ 330122 ಟನ್‌ಗಳಿಗೆ ಏರಿತು. 1960-6!, ರಲ್ಲಿ ಈ ಕಾರ್ಖಾನೆಯ
ಗೊಬ್ಬರದ ಉತ್ಪಾದನೆ330411 ಮೆಟ್ರಿಕ್‌ಟನ್ ಗಳಷ್ಟಾಗಿತ್ತು. ಇದರ ಜೊತೆಗೆ
10666 ಮೆಟ್ರಿಕ್‌ಟನ್‌ಗಳಷ್ಟು ಯೂರಿಯ ಮತ್ತು 36003 ಮೆಟ್ರಿಕ್ ಟನ್
ಗಳಷ್ಟು ಡಬಲ್‌ಮಾಲ್ಟ್ ಉತ್ಪಾದಿಸಲಾಗಿತ್ತು. ಈ ಕಾರ್ಖಾನೆಯ ಆಡಳಿತವನ್ನು
ಸಿಂಧ್ರಿ ಫರ್ಟಿಲೈಸರ್ಸ್ ಅಂಡ್ ಕೆಮಿಕಲ್ಸ್ ಲಿಮಿಟೆಡ್ ಎಂಬ ಸಂಸ್ಥೆ ನೋಡಿ ಕೊಳ್ಳು
ತ್ತದೆ. ಈ ಕಾರ್ಖಾನೆ ಇತ್ತೀಚೆಗೆ ಹೆಚ್ಚವಿಸ್ತಾರ ಗೊಂಡಿದ್ದು, ಇದರ ವಾರ್ಷಿಕ
ಉತ್ಪಾದನೆ 3, 30,000 ಟನ್‌ಗಳಿಗೇರಿದೆ ಭಾರತದಲ್ಲಿ 1960-61, 1965-66
ಮತ್ತು 1973-74 ರಲ್ಲಿ ಅಮೋನಿಯಂ ಸಲ್ಫೇಟ್ ಗೊಬ್ಬರವನ್ನು ಕ್ರಮವಾಗಿ
80 ಸಾವಿರ ಟನ್' 84 ಸಾವಿರ ಟನ್ ಮತ್ತು 1 ಲಕ್ಷ 21 ಸಾವಿರ ಟನ್ ಗಳಷ್ಟು
ಉತ್ಪಾದಿಸಲಾಯಿತು. ಸೂಪರ್ ಪಾಸ್ಪೇಟ್ ಗೊಬ್ಬರವನ್ನು ಕ್ರಮವಾಗಿ 52 ಸಾವಿರ
ಟನ್, 1ಲಕ್ಷ 10 ಸಾವಿರಟನ್ ಮತ್ತು 1ಲಕ್ಷ 20 ಸಾವಿರ ಟನ್‌ಗಳಷ್ಟು ಉತ್ಪಾದಿ
ಸಲಾಯಿತು.

ಸರಕಾರಿ ಕ್ಷೇತ್ರದ ಮತ್ತೊಂದು ಗೊಬ್ಬರದ ಬೃಹತ್ ಕಾರ್ಖಾನೆಯೆಂದರೆ
ನಯೂನಂಗಲ್ ಕಾರ್ಖಾನೆ. ದೇಶದಲ್ಲಿ ಸಾರಜನಕದ ಗೊಬ್ಬರಗಳ ಉತ್ಪಾದನಾ
ಸಾಮರ್ಥ್ಯವನ್ನು ಹೆಚ್ಚಿಸುವ ಉದ್ದೇಶದಿಂದ ಈಕಾರ್ಖಾನೆಯನ್ನು ಪಂಜಾಬ್
ರಾಜ್ಯದ ನಯೂನಂಗಲ್ ಎಂಬಲ್ಲಿ ಸುಮಾರು 30 ಕೋಟಿ ರೂಗಳನ್ನು ಹೂಡಿ
1956ರಲ್ಲಿ ಸ್ಥಾಪಿಸಲಾಯಿತು. ಇದು 1961ರಿಂದ ಉತ್ಪಾದನಾ ಕಾರ್ಯವನ್ನು
ಆರಂಭಿಸಿತು ಈಕಾರ್ಖಾನೆ ದಿನಕ್ಕೆ ಸುಮಾರು 800ಟನ್ ಗೊಬ್ಬರ ಉತ್ಪಾದಿ-
ಸುತ್ತದೆ. 1961ನೇಜುಲೈ 31ರ ವರಗೆ ಈ ಕಾರ್ಖಾನೆ 66 , 274 ಟನ್‌ಗಳಷ್ಟು
ಕ್ಯಾಲ್ಸಿಯಂ ಅಮೋನಿಯಾನೈಟ್ರೇಟನ್ನು ಉತ್ಪಾದಿಸಿತ್ತು. ಭಾರತ ಸರಕಾರ
ಸರಕಾರದ ಆಧೀನದಲ್ಲಿರುವ ಗೊಬ್ಬರದ ಕಾರ್ಖಾನೆಗಳ ಆಡಳಿತನೋಡಿಕೊಳ್ಳಲು
1961ರಲ್ಲಿ ಫರ್ಟಿಲೈಸರ್ ಕಾರ್ಪೋರೇಷನ್ ಆಫ್ ಇಂಡಿಯು ಸಂಸ್ಥೆಯನ್ನು
ಸ್ಥಾಪಿಸಿದೆ. ಈ ಸಂಸ್ಥೆಯ ಅಧಿಕೃತ ಬಂಡವಾಳ 75ಕೋಟಿರೂಗಳು. ಗೊಬ್ಬರದ
ಉತ್ಪಾದನಾ ರಂಗದಲ್ಲಿ ಇಂದು ಗಣನೀಯ ಪ್ರಗತಿ ಹೊಂದಲಾಗಿದೆ. 1950-51
ರಲ್ಲಿ ಭಾರತ ಕೇವಲ 9000 ಟನ್ ನೈಟ್ರೋಜನಸ್ ಮತ್ತು ಫಾಸ್ಪೇಟ್ ಗೊ-
ಬ್ಬರವನ್ನು 15.52ಲಕ್ಷ ಟನ್, ಮತ್ತು ಫಾಸ್ಪೇಟ್‌ಗೊಬ್ಬರದ ಉತ್ಪಾದನೆ 5.2

ಲಕ್ಷಟನ್‌ಗಳಿಗೂ ಏರಿದೆ. 1973-74ರ ವೇಳೆಗೆ ಈ ಎರಡೂ ಗೊಬ್ಬರಗಳ ಉತ್ಪಾದನಾ ಸಾಮರ್ಥ್ಯ 42ಲಕ್ಷಟನ್ ಗುರಿ ಮುಟ್ಟಿತು. 1960-61ರಲ್ಲಿ ನಮ್ಮ ದೇಶದಲ್ಲಿ ರಾಸಾಯನಿಕ ಗೊಬ್ಬರಗಳ ಬಳಕೆ 3ಲಕ್ಷ 6ಸಾವಿರಟನ್‌ಗಳಷ್ಟಿತ್ತು. 1665-66ರಲ್ಲಿ ಇದು 7ಲಕ್ಷ 28ಸಾವಿರಟನ್‌ಗಳಿಗೇರಿತು ಮತ್ತು 1973-47ರಲ್ಲಿ 28ಲಕ್ಷ 39ಸಾವಿರಟನ್‌ಗಳಿಗೇರಿತು.

ರಾಸಾಯನಿಕ ಗೊಬ್ಬರಗಳನ್ನು ತಯಾರಿಸುವ ಅನೇಕ ಸಣ್ಣ ಕಾರ್ಖಾನೆಗಳು ಈಗ ದೊಡ್ಡವಾಗಿವೆ. ಅನೇಕ ಹೊಸ ಕಾರ್ಖಾನೆಗಳು ಭಾರತದ ಅನೇಕ ಕಡೆಗಳಲ್ಲಿ ಆರಂಭವಾಗಿವೆ. ಸರಕಾರಿ ಆಶ್ರಯದಲ್ಲಿರುವ ಫರ್ಟಿಲೈಸರ್ ಕಾರ್ಪೊರೇಷನ್ ಆಫ್ ಇಂಡಿಯ ಮತ್ತು —ಫರ್ಟಿಲೈಸರ್ಸ್ ಅಂಡ್ ಕೆಮಿಕಲ್ಸ್ ಟ್ರಾವಂಕೂರ್ ಸಂಸ್ಥೆಗಳು ಅಧಿಕ ಪ್ರಮಾಣದ ರಾಸಾಯನಿಕ ಗೊಬ್ಬರವನ್ನು ತಯಾರಿಸುತ್ತವೆ. ಇದರ ಜೊತೆಗೆ ಇವು ಹೊಸ ಕಾರ್ಖಾನೆಗಳನ್ನು ಸ್ಥಾಪಿಸಲು ಬೇಕಾದ ತಾಂತ್ರಿಕ ಜ್ಞಾನ ಮತ್ತು ನೆರವನ್ನೂ ನೀಡುತ್ತವೆ. ಈ ಎರಡು ದೊಡ್ಡ ಸಂಸ್ಥೆಗಳ ಜೊತೆಗೆ ಖಾಸಗಿ ಕ್ಷೇತ್ರದಲ್ಲಿ ಸುಮಾರು 10ದೊಡ್ಡ ಕಾರ್ಖಾನೆಗಳು ಪ್ರಾರಂಭವಾಗಿವೆ. ಕರ್ನಾಟಕದ ನೆರರಾಜ್ಯಗಳಾದ ತಮಿಳುನಾಡು, ಕೇರಳ, ಆಂಧ್ರ ಪ್ರದೇಶಗಳಲ್ಲಿ ಸಾರಜನಕಗೊಬ್ಬರಗಳನ್ನು ತಯಾರಿಸುವ ಕಾರ್ಖಾನೆಗಳಿದ್ದು ಇದುವರೆಗೂ ಕರ್ನಾಟಕ ಈರಾಜ್ಯಗಳನ್ನು ಸಾರಜನಕಗೊಬ್ಬರಕ್ಕಾಗಿ ಅವಲಂಬಿಸಬೇಕಾಗಿತ್ತು. ಇಂತಹಪರಿಸ್ಥಿತಿಯನ್ನು ಸುಧಾರಿಸಲು ಈಗ ಮಂಗಳೂರಿನಲ್ಲಿ ಸಾರಜನಕಗೊಬ್ಬರದ ಉತ್ಪಾದನೆಯನ್ನು ಮಾಡುವಂತಹ ಕಾರ್ಖಾನೆಯನ್ನು ನಿರ್ಮಿಸಲಾಗಿದ್ದು, ಅದರ ಉತ್ಪಾದನಾ ಕಾರ್ಯ ಆರಂಭವಾಗಿದೆ.

ರಾಸಾಯನಿಕ ಗೊಬ್ಬರಗಳ ಬಳಕೆಯನ್ನು ಹೆಚ್ಚಿಸುವ ದಿಸೆಯಲ್ಲಿ ಸರಕಾರ ಅನೇಕ ಮುಖ್ಯ ಕಾರ್ಯ ಕ್ರಮಗಳನ್ನು ಕೈಗೊಳ್ಳುತ್ತಿದೆ. ಸಕಾಲದಲ್ಲಿ ಎಲ್ಲ ಸ್ಥಳಗಳಲ್ಲೂ ಗೊಬ್ಬರಗಳನ್ನು ಸಾಕಷ್ಟು ಪ್ರಮಾಣದಲ್ಲಿ ವಿತರಣೆ ಮಾಡುವುದು ಇವುಗಳಲ್ಲೊಂದು. ಇದರ ಜೊತೆಗೆ ರಾಸಾಯನಿಕ ಗೊಬ್ಬರಗಳು ಇನ್ನು ಹೆಚ್ಚು ಜನಪ್ರಿಯವಾಗುವಂತೆ ವಿವಿಧ ಬೆಳೆಗಳಲ್ಲಿ ಪ್ರಾತ್ಯಕ್ಷಿಕೆಗಳನ್ನು ಏರ್ಪಡಿಸುವುದು ರಾಸಾಯನಿಕ ಗೊಬ್ಬರಗಳಿಂದ ವಿಶೇಷವಾಗಿ ಪ್ರಯೋಜನ ಪಡೆದ ಸ್ಥಳಗಳಲ್ಲಿ ಕ್ಷೇತ್ರೋತ್ಸವವನ್ನು ಆಚರಿಸುವುದು ರೈತರಿಗೆ ರೈತಮಹಿಳೆಯರಿಗೆ ತಕ್ಕ ತರಬೇತಿ ಕೊಡುವುದು ಗೊಬ್ಬರಗಳ ಬಗ್ಗೆ ಆಧುನಿಕ ಸಂಶೋಧನೆಗಳ ಕುರಿತು ತಿಳುವಳಿಕೆ ನೀಡುವುದು ರೈತರಿಗೆ ಪೂರೈಸುವ ಗೊಬ್ಬರಗಳ ಪ್ರಮಾಣವನ್ನು ಹೆಚ್ಚಿಸುವ ಜೊತೆಗೆ ಉತ್ತಮ ಗುಣವುಳ್ಳ ಗೊಬ್ಬರಗಳು ಸರಬರಾಜಾಗುವಂತೆ ವ್ಯವಸ್ಥೆ ಮಾಡುವುದು ಮಾರಲ್ಪಡುವ ಗೊಬ್ಬರ ಆಗಾಗ್ಗೆ ಪರೀಕ್ಷಾಲಯಗಳಲ್ಲಿ ಪರೀಕ್ಷೆಗೊಳಪಡಿಸುವುದು. ಕಲಬೆರಕೆ ಆಗದಂತೆ



ಮತ್ತು ಅನಧಿಕೃತ ವ್ಯಕ್ತಿಗಳು ಗೊಬ್ಬರವನ್ನು ಮಾರಾಟ ಮಾಡದಂತೆ ನೋಡಿಕೊಳ್ಳುವುದು' ಮಾರಾಟ ಮಾಡುವಾಗ ರೈತರಿಗೆ ಅನ್ಯಾಯವಾಗದಂತೆ ಎಚ್ಚರ ವಹಿಸುವುದು ಇತ್ಯಾದಿ ಕ್ರಮಗಳನ್ನು ಕೈಗೊಳ್ಳಲಾಗುತ್ತದೆ. ಇದರ ಪರಿಣಾಮವಾಗಿ ನಮ್ಮ ದೇಶದಲ್ಲಿ ಜನತೆಯ ಅವಶ್ಯಕತೆಗಳಿಗೆ ಬೇಕಾಗುವ ಕೃಷಿ ಉತ್ಪನ್ನಗಳ ಉತ್ಪಾದನೆಯಾಗುವ ಭರವಸೆ ಮೂಡಿದ ಜೊತೆಗೆ ರೈತರ ಆರ್ಥಿಕ ಸ್ಥಿತಿಯೂ ಉತ್ತಮಗೊಂಡು ಕೈಗಾರಿಕೆ, ವಾಣಿಜ್ಯ ಮೊದಲಾದ ಕ್ಷೇತ್ರಗಳಲ್ಲೂ ಸಮಗ್ರ ಪ್ರಗತಿಯನ್ನು ಸಾಧಿಸಬಹುದೆಂದು ಆಶಿಸಲಾಗಿದೆ.

# ಕರ್ನಾಟಕ ರಾಜ್ಯ ಜಿಲ್ಲೆಗಳ ಹೆಸರುಗಳ ಉಗಮ

ರೇವಣ್ಣ ಸಿದ್ಧಪ್ಪ, ಉಪನ್ಯಾಸಕರು, ಇತಿಹಾಸ ವಿಭಾಗ, ಸಿದ್ಧಗಂಗಾ ಕಾಲೇಜ್ ತುಮಕೂರು-572102

ಕರ್ನಾಟಕ ರಾಜ್ಯವು 1956 ರಿಂದ 1973 ರವರೆಗೆ ಮೈಸೂರು ರಾಜ್ಯ ಎಂದು ಕರೆಯಲ್ಪಡುತ್ತಿತ್ತು. ಇದು 19 ಜಿಲ್ಲೆಗಳನ್ನು ಒಳಗೊಂಡಿದೆ:-

1. ಕಾರವಾರ (ಉತ್ತರ ಕನ್ನಡ ಜಿಲ್ಲೆ) 2. ಕೊಡಗು 3. ಕೋಲಾರ 4. ಗುಲ್ಬರ್ಗ. 5. ಚಿಕ್ಕಮಗಳೂರು. 6. ಚಿತ್ರದುರ್ಗ. 7. ತುಮಕೂರು. 8. ಧಾರವಾಡ. 9. ಬಳ್ಳಾರಿ. 10. ಬಿಜಾಪುರ. 11. ಬೀದರ್. 12. ಬೆಳಗಾಂ 13. ಬೆಂಗಳೂರು. 14. ಮಂಗಳೂರು. (ದಕ್ಷಿಣ ಕನ್ನಡ ಜಿಲ್ಲೆ) 15. ಮಂಡ್ಯ. 16. ಮೈಸೂರು 17. ರಾಯಚೂರು 18. ಶಿವಮೊಗ್ಗ 19. ಹಾಸನ.

**'ಕರ್ನಾಟಕ, ಹೆಸರಿನ ಉಗಮ:**ಕರ್ನಾಟಕವನ್ನು 'ಕರ್ನಾಟ, 'ಕರ್ನಾಟಕ ಎಂಬುದಾಗಿ ಪ್ರಾಚೀನ ಮಹಾಕಾವ್ಯಗಳಲ್ಲಿ ಶಾಸನಗಳಲ್ಲಿ ಬಳಕೆ ಮಾಡಲಾಗಿದೆ ಕರ್ಣಾಟಿಕ ಎಂಬ ಬಳಕೆಯನ್ನು ಮಹಾಭಾರತ ಭೀಷ್ಮ ಪರ್ವದಲ್ಲಿ (9. 58) ಕಾಣುತ್ತೇವೆ. ಈ ಪದದ ಬದಲಾಗಿ **ಉನ್ನತ್ಯಕಾ** ಎಂಬ ಬಳಕೆಯನ್ನು ಮಹಾಭಾರತದ ಕೆಲವು ಆವೃತ್ತಿಗಳಲ್ಲಿ ಕಾಣಬಹುದಾಗಿದೆ. ಇದರ ಅರ್ಥ ಉನ್ನತವಾದ ತಪ್ಪಲು ಸೀಮೆ ಎಂದಾಗುತ್ತದೆ. ಶ್ರೀರಂಗನಾಥಮುಗಳಿಯವರ ಪ್ರಕಾರ ಕರುನಾಡು ಎಂದರೆ ಎತ್ತರವಾದ ಪ್ರದೇಶ ಎಂದು ಅರ್ಥವಾಗುತ್ತದೆ.

1 **ಕಾರವಾರ:**-ಕಾರವಾರ ಎಂಬ ಹೆಸರು 'ಕಡವಾಡ, ಎಂಬ ಹೆಸರಿನ ರೂಪಾಂತರ. 17-18 ನೆ ಶತಮಾನದಲ್ಲಿ ಈ ಕರಾವಳಿ ಭಾಗವನ್ನು ಕೆನರಾ ಎಂಬ ಹೆಸರಿನಿಂದ ಪೋರ್ಚುಗೀಸರು ಕರೆಯುತ್ತಿದ್ದರು. 1862 ರಲ್ಲಿ ಬ್ರಿಟಿಷರು ಕೆನರಾವನ್ನು ಉತ್ತರ ಮತ್ತು ದಕ್ಷಿಣ ಕೆನರಾ ಜಿಲ್ಲೆಗಳಾಗಿ ವಿಂಗಡಿಸಿದರು. ಅಂದಿನಿಂದ ಉತ್ತರ ಕನ್ನಡ ಜಿಲ್ಲೆಗೆ ಕಾರವಾರ ಮುಖ್ಯ ನಗರವಾಗಿದೆ.

2 **ಕೊಡಗು:**- ಈ ಪದದ ಇಂಗ್ಲೀಷ್ ರೂಪಾಂತರ ಕೂರ್ಗ ಎಂದು ಬಳಕೆಯಲ್ಲಿತ್ತು. ಕೊಡಗು ಎಂದರೆ 'ಪಶ್ಚಿಮದ ಒಳನಾಡು, (Inside west) ಎಂದರ್ಥ. ಕೊಡಗು ಕ್ರೋಢ ದೇಶದ ರೂಪಾಂತರ ವೆಂದೂ ಅದರ ಅರ್ಥ ಕಾಡು ಹಂದಿಗಳ ನಾಡು ಎಂದಾಗುತ್ತದೆ.

3. **ಕೋಲಾರ:**-ಕುವಲಾಲ, ಕೊಲಾಳ, ಎಂಬ ಹೆಸರುಗಳು ಶಾಸನಗಳಲ್ಲಿ ಕಂಡು ಬರುತ್ತವೆ. ಪುರಾಣಗಳಲ್ಲಿ ಪರುಶುರಾಮನು ಕಾರ್ತ್ಯವೀರ್ಯಾರ್ಜುನನನ್ನು ಕೊಂದು ಕೋಲಾಹಲ ಉಂಟುಮಾಡಿದ್ದರಿಂದ ಕೋಲಾಹಲಪುರ. ಕುವಲಾಲ, ಕೊಲಾಳ, ಕೋಲಾರ ಎಂದು ರೂಪಾಂತರ ಹೊಂದಿದೆ ಎಂಬ ಪ್ರತೀತಿ ಇದೆ. ಗಂಗರರಾಜನಾದ ಕೋಲಾಹಲ ಎಂಬುವ ನಿಂದಲೂ ಈ ಹೆಸರುಬಂದಿದೆ ಎಂಬ ಐತಿಹ್ಯವಿದೆ. ಇನ್ನೊಂದು ಪ್ರತೀತಿಯ ಪ್ರಕಾರ ಕೋಲನೆಂಬ ರೈತನು ಗುಪ್ತ ನಿಧಿಯನ್ನು ತನ್ನ ಹೊಲದಲ್ಲಿ ಪಡೆದ ನಂತರ ದೊರೆಯಾದನು. ಆದ್ದರಿಂದ ಕೋಲಾರ ಎಂಬ ಹೆಸರು ಬಂದಿದೆ.

4. **ಗುಲ್ಬರ್ಗ:**- ಗುಲ್ಬರ್ಗವನ್ನು ಕಲ್ಬುರ್ಗಿ ಎಂದು ಕರೆಯುವ ವಾಡಿಕೆ ಇದೆ, ಇದಕ್ಕೆ ಕಲ್ಲಬುರುಜು, ಕಲ್ಲಿನ ಕೋಟೆ ಎಂಬ ಅರ್ಥವಿದೆ. ಇಲ್ಲಿ ಶಿಥಿಲವಾದ ಕಲ್ಲಿನ ಬುರಜನ್ನೂ ಈಗಲೂ ಕಾಣಬಹುದು. ಬಹಮನಿ ಸುಲ್ತಾನರ ಕಾಲದಲ್ಲಿ 14 ನೇ ಶತಮಾನದಲ್ಲಿ ಕಲ್ಬುರ್ಗಿಯು ಗುಲ್ಬರ್ಗ ರೂಪಾಂತರ ಗೊಂಡಿತು.

5. **ಚಿಕ್ಕಮಗಳೂರು:**- ಮಹಾಭಾರತದ ಪ್ರಕಾರ ಸಕ್ಕರೆ ಪಟ್ಟಣದ ರಾಜನಾಗಿದ್ದ ಖುಕ್ಮಾಂಗದನು ತನ್ನ ಚಿಕ್ಕಮಗಳಿಗೆ ಮದುವೆಯ ಸಮಯದಲ್ಲಿ ಕೊಟ್ಟಊರು ಚಿಕ್ಕಮಗಳೂರು ಎಂದಾಯಿತು ಎಂಬ ಪ್ರತೀತಿಇದೆ. ಆದರೆ ಕ್ರಿ. ಶ. 9ನೇ ಶತಮಾನದಿಂದ 12ನೇ ಶತಮಾನದವರೆಗಿನ ಗಂಗರಶಾಸನಗಳಲ್ಲಿ ದೊಡ್ಡ ಮುಗುಳಿ ಮತ್ತು ಚಿಕ್ಕಮುಗುಳಿ ಎಂಬ ಹೆಸರುಗಳ ಉಲ್ಲೇಖವಿದೆ.

6. **ಚಿತ್ರದುರ್ಗ:**- ಅನೇಕ ಶಾಸನಗಳಲ್ಲಿ ಬಖೈರುಗಳಲ್ಲಿ ಚಿತ್ರದುರ್ಗವನ್ನು ಚಿತ್ರಕಲ್ ದುರ್ಗ, ಛತ್ರಕಲ್‌ದುರ್ಗ, ಸುಳಿಗಲ್, ಎಂದು ಕರೆಯಲಾಗಿದೆ. ಚಿತ್ರವೆಂಬ ಪದಕ್ಕೆ ವಿಚಿತ್ರವಾದ, ಆಶ್ಚರ್ಯಕರವಾದ, ಅದ್ಭುತವಾದ ಎಂಬ ಅರ್ಥ ಕೊಡಲಾಗಿದೆ. ದುರ್ಗ ಎಂದರೆ ದುರ್ಗಮ ವಾದ ದಾಟಲು ಕಷ್ಟವಾದ ಎಂಬ ಅರ್ಥ ಕೊಡಲಾಗಿದೆ. (ಚಂದ್ರವಳ್ಳಿ ಭಾಗ 2 : ಪುಟ 1-3

7. **ತುಮಕೂರು:**- ತುಮಕೂರು. ತುಮಕೂರು, ಟುಂಕೂರು, ಎಂಬ ಬಳಕೆಯುಳ್ಳ ಈ ಹೆಸರು ಆರಂಭದಲ್ಲಿ ತುಂಬೆಗೂರು. ತುಮ್ಮೆಗೂರು ಎಂದು ಕಿ. ಶ. 10 ನೇ ಶತಮಾನದ ಶಾಸನಗಳಲ್ಲಿ ಕಂಡುಬರುತ್ತದೆ. ತುಂಬೆಹೂಗಳ ಪ್ರದೇಶವಾದ್ದರಿಂದ ತುಮ್ಮೆಗೂರು, ತುಮಕೂರು ಹೆಸರು ಬಂದಿದೆ ಎಂಬ ಪ್ರತೀತಿ ಇದೆ.

ಕ್ರಿ ಶ. 10-11 ನೇ ಶತಮಾನಗಳಲ್ಲಿ ತುಮ್ಮೆಗೂರಿನ ಪ್ರದೇಶವನ್ನು ಕ್ರೀಡಾಪುರದ ಅರಸರ ಕಾಲದಲ್ಲಿ ಟುಂಕಿ, ಟುಮಕಿಬಾರಿಸುವವರಿಗೆ ದತ್ತಿಯಾಗಿ ಕೊಡಲಾಗಿತ್ತೆಂದು ಟುಂಕಿಹಳ್ಳಿ ಟುಂಕೂರು ಆಯಿತೆಂಬ ಪ್ರತೀತಿಯೂ ಇದೆ.



8 **ಧಾರವಾಡ:**- ಈ ಹೆಸರನ್ನು ಕ್ರಿ. ಶ. 15ನೇ ಶತಮಾನದಿಂದೀಚೆಗೆ ಶಾಸನಗಳಲ್ಲಿ ಕಾಣುತ್ತೇವೆ. ವಿಜಯನಗರದ ಮಾಂಡಲೀಕ ನಾಗಿದ್ದ ಧಾರಾರಾಯನೆಂಬುವನ ವಾಡೆ, ಕ್ರಮೇಣವಾಗಿ ಧಾರವಾಡ ಎಂದು ರೂಢಿಯಲ್ಲಿ ಬಂದಿತೆಂದೂ ಪ್ರತೀತಿ ಇದೆ. ಧಾರಾಪುರಿ ಎಂಬುದು ಧಾರಾವಾಡ ಎಂಬ ರೂಪಾಂತರವಾಗಿದೆ ಎಂಬ ವಾದವಿದೆ.

9 **ಬಳ್ಳಾರಿ:** ಬಳರಿ, ಬಳ್ಳಾರೆ, ಬಳ್ಳಾರಿ ಎಂಬ ರೂಪಾಂತರಗಳು ಬಳಕೆಯ-ಯಲ್ಲಿವೆ. 12ನೇ ಶತಮಾನದಲ್ಲಿ ಮಲ್ಲಪ್ಪಶೆಟ್ಟಿ ಎಂಬ ಶೈವವರ್ತಕನು ಬಳ್ಳ (ಸೇರು, ಅಳತೆಯದು) ವನ್ನು ಶಿವಂಗಲಿವೆಂದು ಭ್ರಮಿಸಿ ಭಕ್ತಿಯಿಂದ ಪೂಜೆ ಮಾಡಿಲಾಗಿ ಆ ಬಳ್ಳವೆ ನಿಜವಾದ ಲಿಂಗವಾಗಿ ಪರಿವರ್ತನೆಯಾಯಿತೆಂದು ಪ್ರತೀತಿ ಇದೆ. ಕುರುಗೋಡು- ಕೋಳೂರು, ಬೈಲೂರುಗಳ ಶಾಸನಗಳಲ್ಲಿ ಬಳ್ಳಾರೆ ಎಂಬ ಪದದ ಬಳಕೆಯನ್ನು ಕಾಣುತ್ತೇವೆ. ಇನ್ನೊಂದು ಐತಿಹ್ಯದ ಪ್ರಕಾರ ನಗರ ದೇವತೆಯಾದ ದುರ್ಗಾ ದೇವತೆಗೆ ಬಳರಿ ಎಂಬ ಹೆಸರಿನ ಪ್ರಯೋಗ ಮಾಡಿರುವುದರಲ್ಲಿ ಜನ್ನ ಕವಿಯ ಯಶೋಧರ ಚರಿತೆಯಲ್ಲಿ ಕಾಣುತ್ತೇವೆ.

10 **ಬಿಜಾಪುರ:** ಆರಂಭದಲ್ಲಿ ಬಿಜ್ಜವಳಿ ಎಂದು ಪ್ರತೀತಿ ಇದ್ದ ಊರು. ಸುಮಾರು 7 ಹಳ್ಳಿಗಳನ್ನು ಒಳಗೊಂಡು ಬಿಜಾಪುರವಾಯಿತೆಂದು ಪ್ರತೀತಿ ಇದೆ. ಇನ್ನೊಂದು ಐತಿಹ್ಯದ ಪ್ರಕಾರ ಆದಿಲ್ ಶಾಹಿ ಸುಲ್ತಾನರ ವಿಜಯನಗರದ ಮೇಲೆ ಧಾಳಿ ಮಾಡಿ ಗೆದ್ದ ಕಾರಣ ವಿಜಯಪುರ, ಬಿಜಾಪುರ ಎಂದು ಕರೆಯಲಾಯಿತು ಎಂಬ ವಾದವಿದೆ

11 **ಬೀದರ್:**- ವಿದುರನಗರ, ವಿದುರರಾಜನಗರ ಎಂದು ಕರೆಯಲ್ಪಡುತ್ತಿದ್ದ ಈ ನಗರ ಬೀದರ್ ಆಗಿದೆ ಎಂಬ ಪ್ರತೀತಿ ಇದೆ. ಮಹಾಭಾರತದ ಕಾಲದಲ್ಲಿ ವಿದರ್ಬ ರಾಜ್ಯದ ಸಂಬಂದ ಹೊಂದಿರುವುದನ್ನು ಕಾವ್ಯಗಳಲ್ಲಿ ಕಾಣಬಹುದು.

12 **ಬೆಳಗಾಂ:** ಕ್ರಿ. ಶ. 10ನೇ ಶತಮಾನದಲ್ಲಿ ಬಿದಿರುಗಳ ಪ್ರದೇಶವಾಗಿದ್ದರಿಂದ ವೇಣುಗ್ರಾಮವೆಂದು ಕರೆಯಲ್ಪಡುತ್ತಿದ್ದು ಕ್ರಮೇಣ ವೇಲಗ್ರಾಮ ಬೇಲಗ್ರಾಮ ಬೆಳಗಾಮ್ ಎಂದು ರೂಪಾಂತರ ಹೊಂದಿದೆ.

13 **ಬೆಂಗಳೂರು:** ಹೊಯ್ಸಳ ರಾಜನಾದ ವೀರಬಲ್ಲಾಳನು ಬೇಟೆಗಾಗಿ ಈ ಪ್ರದೇಶಕ್ಕೆ ಬಂದಾಗ ಬಾಯಾರಿಕೆಯಿಂದ ಹತ್ತಿರದ ಹಳ್ಳಿಗೆ ಬಂದು ಒಬ್ಬ ಅಜ್ಜಿಯ ಮನೆಯಲ್ಲಿ ಬೆಂದಕಾಳನ್ನು ನೀರನ್ನು ಪಡೆದು ಮರಳಿದ ನಂತರ ಅದಕ್ಕೆ ಬೆಂದಕಾಳೂರು ಎಂಬ ಹೆಸರಾಯಿತು ಎಂಬ ಪ್ರತೀತಿ ಇದೆ. ಇನ್ನೊಂದು ಐತಿಹ್ಯದ

ಪ್ರಕಾಶ ಹೊಯ್ಸಳರ ಕಾಲದಲ್ಲಿ ಈ ಊರು ಬೆಂಗಾವಲ ಊರಾಗಿತ್ತೆಂದೂ ಅದು ಬೆಂಗಳೂರು ಎಂಬ ರೂಪಾಂತರ ಹೊಂದಿತೆಂದೂ ಇಲ್ಲಿನ ಜನರು ಹೇಳುತ್ತಾರೆ

14 ಮಂಗಳೂರು: ಮಂಗಳಪುರ. ಮಂಡಪುರ ಎಂಬ ಹೆಸರು ಆರಂಭದಲ್ಲಿ ಬಳಕೆಯಲ್ಲಿದ್ದವು. ಕ್ರಿ. ಪೂ 1ನೇ ಶತಮಾನದಲ್ಲಿ ಇದನ್ನು ಮಂಗರೂತ್ ಎಂಬು ದಾಗಿ ಗ್ರೀಕ್ ಭೂ ವಿಜ್ಞಾನ ಪರಿಣತನು ಕರೆದಿದ್ದಾನೆ. ಕ್ರಿ. ಶ. 7ನೇಶತಮಾನದ ಒಂದು ತಾಮ್ರ ಪತ್ರದಲ್ಲಿ ಮಂಗಳಪುರ ಎಂಬ ಹೆಸರಿನ ಉಲ್ಲೇಖವಿದೆ.

15. ಮಂಡ್ಯ: ಮಾಂಡವ್ಯ ಮುನಿಯ ವಾಸಸ್ಥಾನವಾಗಿದುದರಿಂದ ಮಾಂಡವ್ಯ ಎಂಬ ಹೆಸರು ಬಂದಿದೆ. ಎಂಬಪ್ರತೀತಿ ಇದೆ. ವಿದ್ಯಾರಣ್ಯ ಎಂಬ ಹೆಸರೂ ಇದ್ದಿತು ಎಂಬ ವಾದವಿದೆ.ಅಲ್ಲದೆ ಪುರಾಣಗಳಲ್ಲಿ ವಿಷ್ಣು ಒಬ್ಬ ತಪಸ್ವಿಗೆ ಕಾಣಿಸಿ- ಕೊಂಡ್ಡದ್ದರಿಂದ ಇದನ್ನು ವಿಷ್ಣುಪುರ ಎಂದು ಕರೆಯಲಾಗಿತ್ತು ಎನ್ನುತ್ತಾರೆ. ದ್ವಾಪರ ಯುಗದಲ್ಲಿ ಅಂತ್ಯಭಾಗದಲ್ಲಿ ಇಂದ್ರವರ್ಮನೆಂಬ ರಾಜನು ಸಂತಾನಕ್ಕಾಗಿ ಪೂಜೆ- ನಡೆಸಿದ ಮೇಲೆ ಸೋಮವರ್ಮನೆಂಬ ಮಗನುಜನಿಸಿದನು. ಆಗ ಹೊಸ ಅಗ್ರಹಾರ ವನ್ನು ಕಟ್ಟಿಸಿ ದಾನಮಾಡಿಅದಕ್ಕೆ ಮಾಂಡವೇಮು ಎಂಬ ಹೆಸರಿಟ್ಟನಂತೆ ಮಾಂಡವೇಮು ಕ್ರಮೇಣ ಮಂಡ್ಯವಾಯಿತೆಂದು ಪ್ರತೀತಿ.

16. ಮೈಸೂರು:. ಮಹಾಭಾರತದ ಕಾಲದಿಂದಲೂ ಮಹಿಷಪುರವೆಂದೂ ಮಹಿಷ ಮಂಡಲವೆಂದೂ ಕರೆಯಲಾಗುತ್ತಿತ್ತು. ಅಶೋಕನ ಶಾಸನಗಳಲ್ಲಿ ಕೂಡ ಮಹಿಷ ಮಂಡಲ ಎಂಬ ಉಲ್ಲೇಖವಿದೆ. ಕ್ರಮೇಣ ಮಹಿಷೂರೂ, ಮೈಸೂರು ಎಂದಾಗಿದೆ

17 ರಾಯಚೂರು: ಕ್ರಿ. ಶ. 10ನೇ ಶತಮಾನದಲ್ಲಿ ಕಾಕತೀಯರ ಶಾಸನಗಳಲ್ಲಿ ರಾಚೂರು ಎಂಬ ಉಲ್ಲೇಖವಿದೆ. ರಾಜರ ಊರು, ರಾಜೂರು, ಎಂಬ ರೂಪಾಂತರ ಹೊಂದಿದೆ. ಒಂದು ಐತಿಹ್ಯದ ಪ್ರಕಾರ ಮೊಲವು ಒಂದು ಬೇಟೆನಾಯನ್ನು ಕೊಂದು ಹರಿದು ಚೂರುವಾಗಿದ್ದನ್ನು ನೋಡಿದ ಪಾಳೆಯಗಾರನು ಆ ಸ್ಥಳವನ್ನು ನಾಯಿಚೂರು ಎಂದು ಕರೆದನಂತೆ ಕ್ರಮೇಣ ರಾಯಚೂರು ಎಂದು ರೂಪಾಂತರ ವಾಯಿತೆಂದು ವಾಡಿಕೆಯಿದೆ

18. ಶಿವಮೊಗ್ಗ:- ಶಿವಮುಖ, ಶಿವಮೊಗ, ಎಂಬುದರ ರೂಪಾಂತರ ಶಿವಮೊಗ್ಗ ಯಾಗಿದೆ ಎಂದು ಒಂದು ವಿಚಾರ ಸರಣಿಯಿದೆ. ಸಂತನೊಬ್ಬನು ಕಹಿಗಿಡದ ಮೂಲಿ ಕೆಗಳನ್ನು ಮೊಗ್ಗೆಯಲ್ಲಿ ಬೇಯಿಸಿ ಸಿಹಿಯಾಗುವಂತೆ ಮಾಡಿದನೆಂದೂ ಅದು ಸಿಹಿಮೊಗ್ಗೆ ಎಂದು ಕರೆಯಲಾಯಿತೆಂದೂ ವಾಡಿಕೆಯಿದೆ.

ಸಿದ್ದಗಂಗಾ



# ಮಣಿಕರ್ಣ ಮಹಾಕ್ಷೇತ್ರ

ಯಂ. ಬಿ. ಸದಾಶಿವಯ್ಯ. ಎಂ. ಎ. ಬಿ. ಇಡಿ.

(ಯೂತ್ ಹಾಸ್ಟಲ್ ಅಸೋಶಿಯೇಷನ್ ಆಪ್ ಇಂಡಿಯಾ (Y. A. H. I) ದವರು ಮೇ ಜೂನ್‌ಲ್ಲಿ ಏರ್ಪಡಿಸಿದ್ದ ಹಿಮಾಲಯದಲ್ಲಿ ಚಾರಣ (Himalayan trekking) ನಲ್ಲಿ ಭಾಗವಹಿಸಿದ್ದ ದಿನಚರಿಯಿಂದ.)

ಪ್ರಕೃತಿಯ ಭೂಗರ್ಭದಲ್ಲಿ ಅಡಗಿರುವ ಮಹಾನ್ ಅದ್ಭುತಗಳಲ್ಲೊಂದಾಗಿ, ಅಪ್ತರೂಪವಾಗಿ ಕೇಳಿಬರುವ ಬಿಸಿನೀರಿನ ಬುಗ್ಗೆಗಳು ( Hot Springs) ಮಣಿಕರ್ಣ ಮಹಾ ಕ್ಷೇತ್ರಕ್ಕೆ ತಿಲಕ ಪ್ರಾಯವಾಗಿವೆ. ಹಿಮ ಮಕುಟ ತೊಟ್ಟ ಗಿರಿಪಕ್ತಿಗಳ ಸಾಲಿನಲ್ಲಿ, ಆಗಸವನ್ನು ಚುಂಬಿಸಲು ಪ್ರಯತ್ನಿಸುವ ಹೆಮ್ಮರಗ- ಳೊಂದಿರುವ ಹಚ್ಚಹಸಿರಿನ ಕಡಿದಾದ ಕಣಿವೆಗಳನ್ನೊಂದಿರುವ ಮತ್ತು ಹಿಮ ಕರಗಿ ಹರಿಯುವ ಹಿಮದ ಬಣ್ಣದ ಬಿಳಿಯ ನೀರ ತುಂಬಿ ತುಳುಕುವ ನದಿಗಳ ಸೊಬಗಿನ ಬೀಡಾದ ರಾಜ್ಯ ಹಿಮಾಚಲಪ್ರದೇಶ. ಆ ರಾಜ್ಯದ ಒಂದು ಪ್ರಮುಖ ಜಿಲ್ಲಾ ಕೇಂದ್ರವಾದ ಕುಲ್ಲಿ ನಗರದಿಂದ 24 ಕಿ. ಮೀ. ದೂರದಲ್ಲಿ ನೆಲಸಿರುವ ಪುಣ್ಯ ಕ್ಷೇತ್ರವೇ ಮಣಿಕರ್ಣ ಅಥವಾ ಮಣಿಕರ್ಣ ಕ್ಷೇತ್ರ.

ಕವ್ಲಾನಗರದಿಂದ ಮಣಿಕರ್ಣಕ್ಕೆ ಪ್ರಯಾಣ ಮಾಡುವುದೇ ಪ್ರವಾಸಿಗರ ಮತ್ತು ಯಾತ್ರಿಕರಿಗೊಂದು ಮಹದಾನಂದ. ರಸ್ತೆಯ ಇಕ್ಕೆಲಗಳಲ್ಲಿ ಕಲ್ಲಿವ್ ಮತ್ತು ಸೇಬಿನ ಹಣ್ಣಿನ ತೋಟಗಳು (Orchards ) ಕಣ್ಣಿಗೆ ಹಬ್ಬವನ್ನುಂಟು ಮಾಡುತ್ತವೆ. ಮೂರುಕಡೆ ಪರ್ವತಗಳಿಂದ ಆವೃತವಾದ ಈ ಪಟ್ಟಣಕ್ಕೆ ರಸ್ತೆ ಯನ್ನು ಮಾಡುವುದು ಹಿಮಾಚಲ ಸರ್ಕಾರಕ್ಕೆ ಒಂದು ಸವಾಲೇಸರಿ. ಗಾತ್ರದ ಬಂಡೆಗಳನ್ನೂ ಸೀಳಿ ಎಷ್ಟೋಕಡೆ ವಾಹನಗಳು ಹೋಗುವಷ್ಟು ಹಾದಿ ಮಾಡ- ಲಾಗಿದೆ. ಹಾದಿಯುದ್ದಕ್ಕೂ ಪಕ್ಕದಲ್ಲಿ ಹಿಮಾಚಲ ಪ್ರವಾಸೋದ್ಯಮದ ವಿಶ್ರಾಂತಿ ಧಾಮಗಳು ಮತ್ತು ಇತರ ವಸತಿ ಗೃಹಗಳ ಫಲಕಗಳು ಪ್ರವಾಸಿ- ಗಳನ್ನು ಮತ್ತು ಯಾತ್ರಿಕರನ್ನು ಸ್ವಾಗತಿಸುತ್ತವೆ.

ಮಣಿಕರ್ಣ ಕ್ಷೇತ್ರದ ಹತ್ತಿರ, ರಸ್ತೆಯ ಪಕ್ಕದಲ್ಲೆ, ನಿರ್ಮಲವಾದ ಜಲವನ್ನು- ಹೊತ್ತು ಭೋರ್ಗರೆಯುತ್ತಾ ಪಾರ್ವತಿನದಿ ಹರಿಯುತ್ತದೆ. ಆ ಪಾರ್ವತಿನದಿಯ ದಡನಲ್ಲಿ ಈ ಮಣಿಕರ್ಣ ಪಟ್ಟಣವಿರುತ್ತದೆ. ರಸ್ತೆಯಲ್ಲಿ ನಡೆದು ಹೋಗುತ್ತಾ

ನದಿಯ ಕಡೆಗೆ ಗಮನಿಸಿ ನೋಡಿದರೆ ಅಲ್ಲಲ್ಲಿ ಹತ್ತಾರುಕಡೆ ನದಿಯ ದಡಗಳಲ್ಲಿ ಬಿಸಿನೀರಿನ ಹಬೆ, ನದಿನೀರಿನ ತುಂತುರಿನೋಪಾದಿ ಕಾಣಿಸಿ ಕೊಳ್ಳುತ್ತದೆ. ವಿದೇಶಿಯರು ತಂಡ ತಂಡಗಳಲ್ಲಿ ಕಾಣಿಸಿ ಕೊಂಡು ಆ ಪ್ರದೇಶಕ್ಕೆ ಜಾತ್ರೆಯ ಬಣ್ಣವನ್ನು ಕೊಡುತ್ತಾರೆ

ಮಣಿಕರ್ಣಕ್ಷೇತ್ರದಲ್ಲೇ ಇವು ಬಹಳ ವಿರಳ ಮತ್ತು ಅವುಗಳ ಸದುಪಯೋಗ ನಮನ್ನು ಬೆರಗು ಗೊಳಿಸುತ್ತವೆ. ಮಣಿಕರಣ ಒಂದು ಫರ್ಲಾಂಗು ದೂರವಿದ್ದಂತೆಯೇ ಅಲ್ಲಿನ ಗುರುದ್ವಾರ, ರಾಮ ಮಂದಿರ ಮತ್ತು ಶಿವಾಲಯಗಳ ಸುತ್ತಲೂ ಇರುವ, ಬಣ್ಣ ಬಣ್ಣದ ಬಾವುಟಗಳು ತೋರಣಗಳು ಕಾಣಿಸಿ ಕೊಂಡು ನಿತ್ಯೋತ್ಸವ ಮೆರುಗನ್ನು ಕೊಡುತ್ತವೆ. ಈ ಪಟ್ಟಣದ ½ ಫರ್ಲಾಂಗು ದೂರದಲ್ಲಿ ಹೋದಂತೆ ಬೃಹದಾಕಾರದ ಬಿಸಿ ನೀರಿನ ಬುಗ್ಗೆಯಿಂದ ಬರುತ್ತಿರುವ ಹೆಚ್ಚು ಪ್ರಮಾಣದ ಹಬೆ ನಮ್ಮನ್ನು ಆ ಸ್ಥಳಗಳಿಗೆ ಆಕರ್ಷಿಸುತ್ತದೆ.

ಮಣಿಕರ್ಣ ಹಿಂದು ಮತ್ತು ಶಿಖ್ ಮತಗಳ ಸಂಗಮವೆಂದರೆ ತಪ್ಪಾಗಲಾರದು. ಶಿವಾಲಯದ ಮತ್ತು ರಾಮಮಂದಿರದ ಭಕ್ತಾದಿಗಳ. ಸಡಗರ ಒಂದುಡೆಕಯಾದರೆ ಗುರುಪಂಥದ ಶಿಖ್ ಜನರ ಕಾರ್ಯಾಚರಣೆಮತ್ತೊಂದುಕಡೆ. ಎರಡು ಕೇಂದ್ರಗಳಲ್ಲೂ ಯಾತ್ರಾರ್ಥಿಗಳಿಗೆ ಮತ್ತು ಪ್ರವಾಸಿಗರಿಗೆ ಉಚಿತ ಬಿಸಿನೀರಿನಸ್ನಾನ. ವಸತಿ ಮತ್ತು ಊಟದವ್ಯವಸ್ಥೆ ಇದೆ. (ಬೆಂಗಳೂರಿನಿಂದ ಹೊರಟ ನಾವು ಕರ್ನಾಟಕ ತಂಡದವರಾದ ನಾವು ಗುರು ದ್ವಾರದ ಬಿಸಿನೀರಿನ ಕೊಳಗಳಲ್ಲಿ ಮನಸಾರೆ ಮಿಂದು, ರಾಮ ಮಂದಿರದಲ್ಲಿ ಊಟಮಾಡಿ, ಗುರುದ್ವಾರದಲ್ಲಿ ಊಟದವ್ಯವಸ್ಥೆಯನ್ನರಿಯಲು ಮತ್ತೊಮ್ಮೆ ಅಲ್ಲಿಯೂ ಸಹಾ ಊಟಮಾಡಿದೆವು, ಹಿಂದೂ, ಶಿಖ್ ಮತಗಳ ಧರ್ಮೈಕ್ಯತೆ ಇದೆಯಲ್ಲವೆ ?)

ಆ ಬುಗ್ಗೆಗಳಲ್ಲಿ ಕುದಿಯುವ ನೀರಿನ ಉಷ್ಣಾಂಶ 100 ಡಿಗ್ರಿಗಳಿದ್ದು, ಇತ್ತೀಚಿಗೆ ಆ ನೀರನ್ನು ಕೊಳಗಳಲ್ಲಿ ಶೇಖರಿಸಿ ತಕ್ಕ ಪ್ರಮಾಣದಲ್ಲಿ ತಣ್ಣೀರು ಸೇರಿಸಿ ಸ್ನಾನಕ್ಕೆ ಅನುಕೂಲ ಮಾಡಿ ಕೊಡುತ್ತಾರೆ. ಈ ಪವಿತ್ರಸ್ಥಳಗಳಲ್ಲಿ ಅಡುಗೆ ಮಾಡುವ ವಿಧಾನವೂ ವಿಚಿತ್ರ ಮತ್ತು ಕುತೂಹಲಮಯವಾಗಿರುತ್ತೆ. ಅಕ್ಕಿ ನೀರು, ಕಾಯಿಪಲ್ಯಗಳನ್ನು ಪಾತ್ರೆಗಳಲ್ಲ ಹಾಕಿ ಆ ಪಾತ್ರೆಗಳನ್ನು ಈ ಬಿಸಿ ನೀರಿನ ಬುಗ್ಗೆಗಳ ಮೇಲಿಟ್ಟರೆ 20 ನಿಮಿಷಗಳಲ್ಲಿ ಅಡುಗೆ ಸಿದ್ಧ. ಸಾವಿರಾರು ಯಾತ್ರಿಗಳ ಹಸಿವು ನೀಗುವುದು. ಪ್ರಕೃತಿಯ ಎಂಥಹ ವರ ? ಇಂಥ ಬಿಸಿನೀರಿನ ಬುಗ್ಗೆಗಳು ಅಲ್ಲಲ್ಲಿದ್ದರೆ ಪ್ರಕೃತಿ ಮಾತೆ ವಿಕಲಾಂಗಳಾಗುತ್ತಿಲ್ಲ ಮತ್ತು ಪರಿಸರ ಮಾಲಿನ್ಯದ



ಕಠೋರ ಶಾಪ ಮಾನವನಿಗೆ ತಟ್ಟುತ್ತಿರಲಿಲ್ಲ! ಮಣಿಕರ್ಣ ಪಟ್ಟಣ ಬೀದಿಗಳಲ್ಲಿ ಯಾತ್ರಿಕರು, ಪ್ರವಾಸಿಗರು, ಹೆಚ್ಚಾಗಿ ವಿದೇಶಿಯರು ತಂಡ ತಂಡಗಳಲ್ಲಿ ಕಾಣಿಸಿಕೊಂಡು ಆ ಪ್ರದೇಶಕ್ಕೆ ಜಾತ್ರೆಯ ಬಣ್ಣವನ್ನು ಕೊಡುತ್ತಾರೆ.

ಮಣಿಕರಣ್— 'ಮಣಿಕರ್ಣ', ಕ್ಕೆ ಒಂದು ಪುರಾಣದ ಹಿನ್ನೆಲೆಯಿದೆ. ಜಗತ್ಪಿತನಾದ ಪರಶಿವನು ತನ್ನ ಪತ್ನಿಯೊಡನೆ ಆ ಗಿರಿ ಪಂಕ್ತಿಗಳಲ್ಲಿ ವಿಹರಿಸುತ್ತಿರಲು, ಪಾರ್ವತೀ ದೇವಿಯ ಕರ್ಣ (ಕಿವಿ) ಮನ್ನಾಲಂಕರಿಸಿದ ಅಪೂರ್ವಮಣಿ ಒಂದು ಆನದಿಯೊಳಕ್ಕೆ ಅಕಸ್ಮಿಕವಾಗಿ ಬೀಳುತ್ತದೆ. ಆ ಜಗನ್ಮಾತೆ ತನ್ನ ಪತಿದೇವರನ್ನು ಕಳೆದು ಹೋದ ಮಣಿತರಿಸಿಕೊಡಿರೆಂದು ಬೇಡಿಕೊಳ್ಳುತ್ತಾಳೆ. ತನ್ನ ಅರ್ಧಾಂಗಿಯನ್ನ ಸಂತೈಸಲು ಈಶ್ವರನು ತನ್ನ ಭೂತರನ್ನೂ, ಗಣರನ್ನು ಕಳುಹಿಸಿ, ಮಣಿಹುಡಿಕಿ ತರಬೇಕೆಂದು ಆಜ್ಞಾಪಿಸುತ್ತಾನೆ, ತನ್ನ ಭೂತಗಣರ ವ್ಯರ್ಥ ಪ್ರಯತ್ನವನ್ನು ಕಂಡ ಪರಮೇಶ್ವರನು ಕುಪಿತನಾಗಿ. ತನ್ನ ಬಾಯಿಂದ ರಭಸದಿಂದ ಗಾಳಿಯನ್ನು ಮಣಿಬಿದ್ದ ಸ್ಥದಲ್ಲಿ ಊದಲು ಭೂಗರ್ಭದಿಂದ ಎಲ್ಲವೂ ಮೇಲೆ ಬರುತ್ತಿರಲು ಜಗನ್ಮಾತೆಯ ಕಿವಿಯ ಮಣಿಯೂ ಸಹಾ ಹೊರಕ್ಕೆ ಬರುತ್ತದೆ. ಅಂದಿನಿಂದ ಭೂಗ್ಗರ್ಭದಿಂದ ಬರುತ್ತಿರುವ ಬಿಸಿನೀರೇ ಈ ಬಿಸಿನೀರಿನ ಬುಗ್ಗೆ, ಪ್ರತಿ ಪುರಾಣ ಘಟನೆಗಳ ಹಿನ್ನೆಲೆಯಲ್ಲಿ ಜನಾನುಕೂಲವೆ ಮೂಲವಲ್ಲನೆ ? ಇಂದಿಗೂ ಸಹಸ್ರ ಸಹಸ್ರಾರು ಯಾತ್ರಾರ್ಥಿಗಳು ಈ ಹಿಮದ ಬಳಿಯ ವಾತವರಣದಲ್ಲಿ, ಹಿತವಾದ ಬಿಸಿನೀರಿನ ಕೊಳದಲ್ಲಿ ಮಿಂದು ಲಂಗರುಗಳಲ್ಲಿ ಪ್ರಸಾದವನ್ನು ಸ್ವೀಕರಿಸುತ್ತಾರೆ ಇಲ್ಲಿನ ವ್ಯವಸ್ಥೆ ಕರ್ನಾಟಕದಲ್ಲೇ ದಾಸೋಹಕ್ಕೆ ಹೆಸರಾದ ಶ್ರೀ ಸಿದ್ಧಗಂಗಾ ಮತ್ತು ಧರ್ಮಸ್ಥಳ ಕ್ಷೇತ್ರಗಳನ್ನು ಜ್ಞಾಪಕಕ್ಕೆ ತರುತ್ತದೆ.

ಪೌರಾಣಿಕ ಹಿನ್ನೆಲೆ ಹೇಗೇ ಇರಲಿ, ವೈಜ್ಞಾನಿಕ ದೃಷ್ಟಿಯಿಂದ ಈ ಬಿಸಿ ನೀರಿನ ಬುಗ್ಗೆ ಭೂಗರ್ಭದ ಗಂಧಕಾಂಶ (Sulpher) ದಿಂದ ಕೂಡಿರುತ್ತದೆಂದು ಮತ್ತು ಇಂತಹ ಬಿಸಿನೀರಿನ ಸ್ನಾನ ವೈಜ್ಞಾನಿಕವಾಗಿ, ಕೀಲು ನೋವು, ಚರ್ಮ ರೋಗ ಮುತಾದ ಅನೇಕ ರೋಗಗಳಿಗೆ ರಾಮಬಾಣವೆಂದು ವೈದ್ಯರು ಹೇಳುತ್ತಾರೆ. ಮಣಿ ಕರ್ಣ ಮಹಾಕ್ಷೇತ್ರಕ್ಕೆ ಭೇಟಿ ಸಂತೋಷ ಸಂತೃಪ್ತಿಗಳ ಜೊತೆಗೆ ಜೀವನಾದ್ಯಂತ ನೆನಪಿಡಬಹುದಾದ ವರ್ಣನಾತೀತವಾದ ಅನುಭವವನ್ನು ತಂದು ಕೊಡುತ್ತದೆ.

# ಪಂಪ ಭಾರತದ ಕೆಲವು ಮಹತ್ವ ಪ್ರಸಂಗಗಳು

—ಕೆ. ವೈ. ಶಿವಕುಮಾರ್
ಕನ್ನಡ ಅಧ್ಯಾಪಕ, ಅಂಚೆ ಮತ್ತು ತೆರಪಿನ ಶಿಕ್ಷಣ ಸಂಸ್ಥೆ, ಮೈಸೂರು-6

ಕನ್ನಡ ಸಾಹಿತ್ಯದ ಆದಿಕವಿ, ಆದರ್ಶಕವಿ, ಅಗ್ರಕವಿ, ಹತ್ತನೆ ಶತಮಾನದ ಕನ್ನಡ ಸಾಹಿತ್ಯದ ಕೇಂದ್ರವ್ಯಕ್ತಿಯಾದ ಪಂಪನ 'ವಿಕ್ರಮಾರ್ಜುನ ವಿಜಯ' ಕಾಲದ ದೃಷ್ಟಿಯಿಂದಲೂ ಮಹತ್ವವಾದುದು.

ಪಂಪಭಾರತದಲ್ಲಿ ಮೊದಲಿಗೆ 'ಚಾಗದ ಭೋಗದ ಅಕ್ಕರದ ಗೇಯದ ಗೊಟ್ಟಿಯ ಅಲಂಪಿನ ಇಂಪುಗಳ್ಗೆ ಆಗರವಾದ ಮಾನಸರೆ ಮಾನಸರ್' (ತ್ಯಾಗ ಭೋಗ ಸಾಹಿತ್ಯ ಸಂಗೀತ ಗೋಷ್ಠಿಯ ಸೊಗಸಿನ ಸುಖಕ್ಕೆ ಆಶ್ರಯವಾಗಿರುವ ಮನುಷ್ಯರೆ ಮನುಷ್ಯರು) 'ಎಂಬ ಮಾತುಗಳು ಓದುಗರ ಗಮನವನ್ನು ಸೆಳೆಯುತ್ತವೆ. 'ಸಂಸಾರ ಸಾರ ಸರ್ವಸ್ವ ಫಲಂ, 'ಸೊಗಯಿಸುವ ಸಂಸಾರ ಸಾರೋದಯನ್', ಎಂದಿರುವ ಪಂಪ ಭೋಗವನ್ನು ತ್ಯಜಿಸಿ ಎಂದಿಲ್ಲ, ತ್ಯಾಗಕ್ಕೆ ಕೊಟ್ಟಿರುವ ಪ್ರಾಧಾನ್ಯತೆಯನ್ನೆ ಭೋಗಕ್ಕೂ ಕೊಟ್ಟಿದ್ದಾನೆ ತನ್ನ ಕಥಾನಾಯಕ ಅರ್ಜುನನ ಜೀವ ಬಿಂದು ಕುಂತಿಯ ಗರ್ಭವನ್ನು ಸೇರಿತೆನ್ನುವ ಸಂದರ್ಭದಲ್ಲಿ ಕುಂತಿಯ ದಿವ್ಯಗರ್ಭವೆಂಬ ಕಪ್ಪೆಚಿಪ್ಪಿನಲ್ಲಿ ದಿವ್ಯಾಂಶವೆಂಬ ಮುತ್ತಿನ ಫಲದ ಜಲಬಿಂದು (ಸ್ವಾತಿಹನಿ) ಸೇರಿತೆಂದು, ಸೃಷ್ಟಿಕ್ರಿಯೆಗೆ ಬಹಳ ಉನ್ನತಾರ್ಥವನ್ನು ಕೊಟ್ಟಿದ್ದಾನೆ. ಮೋಕ್ಷದಷ್ಟೆ ಇಹಜೀವನವೂ ಪ್ರಮುಖವಾದುದು, ಕಡೆಗಣಿಸುವಂತಹದ್ದಲ್ಲವೆಂಬುದು ಪಂಪನಅಭಿಪ್ರಾಯ.

ಸುಭದ್ರೆಯನ್ನು ಮದುವೆಯಾದ ಮೇಲೆ ಅರ್ಜುನನು ಸುಭದ್ರೆ ಮತ್ತು ಕೃಷ್ಣನೊಡನೆ ಒಮ್ಮೆ ವನವಿಹಾರಕ್ಕೆ ಹೋಗಿದ್ದಾಗ ಅಲ್ಲಿಗೆ ಅಗ್ನಿ ಬ್ರಾಹ್ಮಣವೇಷದಲ್ಲಿ ಬರುತ್ತಾನೆ. ಅವನನ್ನು ನೋಡುತ್ತಿದ್ದಂತೆಯೆ, ಅವನು ಅಗ್ನಿಯೆಂದು ಅರಿಯದ ಅರ್ಜುನ ತನ್ನಲ್ಲೆ 'ತಪೋನಿಯಮದಲ್ಲಿ ನಿರತನಾಗಿರುವ, ಇಲ್ಲಿಗೆ ಬರುತ್ತಿರುವ ಬ್ರಾಹ್ಮಣನಿಗೆ ಏನು ಪ್ರೀತಿಯೊ, ಅದನ್ನು ಅವನು ನನ್ನನ್ನು ಬೇಡಿದರೆ, ಪಾಪವನು ಕಳೆದು ಕೊಂಡವರು, ಸಂಪೂರ್ಣ ಪುಣ್ಯವಂತರು ನಾನಲ್ಲದೆ, ಬೇರೆ ಯಾರೂ ಇಲ್ಲ" ಎಂದು ಕೊಳ್ಳುತ್ತಾನೆ. ಅಷ್ಟರಲ್ಲಿ ಆತ ಬಂದು ಶೇಷಾಕ್ಷತೆಯನ್ನು ಕೊಟ್ಟು ನಿಲ್ಲುತ್ತಾನೆ. ಅರ್ಜುನ ಅವನಿಗೆ 'ನಿಮಗೆ ಪ್ರಯೋಜನವಾಗುವುದನನ್ನು ಬೇಡಿಕೊಳ್ಳಿ

ಎನ್ನುತ್ತಾನೆ. ಅಗ್ನಿ 'ರತ್ನಾಭರಣಾದಿ ವಸ್ತುಗಳೊಂದರಲ್ಲಿಯೂ ನನಗೆ ಇಷ್ಟವಿಲ್ಲ,
ಅವುಗಳಿಂದೇನು ಪ್ರಯೋಜನ, ಊಟ ನನಗೆ ಇಷ್ಟವಾದುದು' ದೇಹ ಹಸಿದಿ
ಮರಗಟ್ಟಿ ಹೋಗಿದೆ. ನಾನು ಹೇಳುವುದನ್ನು ತೃಪ್ತಿಯಾಗಿ ಊಟಮಾಡಲು
ಕೊಡುವುದಾದರೆ ಕೊಡುವುದು, ಎಂದನು. ಅರ್ಜುನ 'ಅದೇನು ದೊಡ್ಡದು,
ಕೊಟ್ಟೆನು, ಯಾವುದು ನೀನು ಊಟಮಾಡುವುದು, ಎಂದು ಕೇಳಿದನು. ಇಷ್ಟ
ರಲ್ಲಿ ಅಲ್ಲಿಗೆ ಬಂದ ಕೃಷ್ಣ 'ಈ ಬಕವೇಷಿ ನಿನ್ನನ್ನು ಏನನ್ನು ಬೇಡಿದನು, ನೀನು
ಈತನಿಗೆ ಏನನ್ನು ಕೊಟ್ಟೆ, ಎಂದನು. ಅರ್ಜನ 'ಹಸಿದು ಊಟಬೇಡಿದನು,
ಬಡವನು, ನಾನು ಊಟ ಮಾಡಲು ಕೊಟ್ಟೆನು, ಅದಲ್ಲದೆ ಇಲ್ಲಿ ಮತ್ತಾವ ಚಮ
ತ್ಕಾರದ ಮಾತು ಕಾಣೆನು, ಎಂದನು.

ಕೃಷ್ಣ 'ನೀನೇನು ಮಾಡಿದೆ, ಇನ್ನು ಕೊಡುವ ಮಾತನ್ನು ಆಡಬೇಡ
ಇವನು ಊಟಮಾಡುವುದು ಖಾಂಡವವನವನ್ನು. ಈತನು ಅಗ್ನಿ. ಈ ಮೊದಲು
ಹೀಗೆಯೆ ಸುಳ್ಳು ಹೇಳಿ, ಇಂದ್ರನೊಡನೆ ರಾಜರೆಲ್ಲರನ್ನೂ ಯುದ್ಧಮಾಡಿಸಿದ್ದಾನೆ.
ಈತನು ಆಡಿನ ಮುಖದ ಹುಲಿ, ಬಿಳಿಯದನ್ನು ಕಪ್ಪುಮಾಡುವವನು, ಈತನ
ಮಾತು (ಈತನಿಗೆ ಕೊಟ್ಟ ಮಾತು) ಮಾತಲ್ಲ' ಎಂದನು. ಈ ಮಾತು ತನ್ನನ್ನು
ಮೂದಲಿಸಿದಂತಾಗಲು ಅರ್ಜುನ 'ದಾನ ತೆಗೆದುಕೊಂಡವನ ಹಿರಿಮೆ ಹೇಳುವುದಾದರೆ
ಅವನು ಅಗ್ನಿ. ಹೋರಾಡುವವನ ಹಿರಿಮೆ ಹೇಳುವುದಾದರೆ, ಅವನು ದೇವೇಂದ್ರ
ದಾನ ಕೊಟ್ಟ. ಸ್ಥಾನದ ಪ್ರದೇಶವನ್ನು ಹೇಳುವುದಾದರೆ, ಆ ಯಮುನಾನದಿಯ
ದಡ, ಪ್ರೀತಿಯಿಂದ ಕೊಟ್ಟವನು ನಾನು, ದಾನ ನೀಡಿದ್ದನ್ನು ಕೇಳಿದವನು-
ಭೂಲೋಕವನ್ನೆ ಧರಿಸಿಕೊಂಡವನಾದ ನೀನು. ಅದರಿಂದ ಎರಡು ಮಾತನ್ನು
ಆಡಬಾರದು. ಇದುಪುಣ್ಯದಿಂದಲ್ಲದೆ ಕೂಡಿಬರುತ್ತದೆಯೆ. ......... ಮೇಲೆಬಿದ್ದು
ಸುತ್ತುಬಿದ್ದುವರಿದು ನಿಂತ ಶತ್ರುಗಳೆಂಬ ಮರಗಳ ಸಮೂಹದ ಬೇರುಗಳನ್ನು
ಆಕಾಶಕ್ಕೆತ್ತದೆ, ಬಂದು ತನ್ನ ಮರೆಹೊಕ್ಕವರನ್ನ ಕಾಯದೆ (ರಕ್ಷಿಸದೆ) ತ್ಯಾಗದ
ಒಳಿತಿನ ಅಚ್ಚೊತ್ತದೆ ಬಿಟ್ಟು ಬಾಳುವ ಹುಲುಮಾನವ ನೆಂಬುವನು ಬ್ರಹ್ಮಾಂಡವೆಂಬ
ಒಂದು ಅತ್ತಿಯ ಹಣ್ಣಿನಲ್ಲಿರುವ ಹುಳುವಲ್ಲದೆ ಮನುಷ್ಯನೇ' ಕೃಷ್ಣ ' ಎಂದು ಮರು
ಮಾತಿಗೆಅವಕಾಶವಿಲ್ಲದೆ ನುಡಿವನು.

ಕೃಷ್ಣ 'ಎಲೈ ಅರ್ಜುನನೆ ಕೇಳು, ನಿನ್ನ ಹೋಲಿಕೆಗೊ ಸಮಾನತೆಗೊ ಬರುವವರು
ಈ ಭೂಮಿಯಲ್ಲಿ ಯಾರೂ ಇಲ್ಲ. ಹಿಮವತ್ ಪರ್ವತದಂತಿರುವ ನಿನ್ನ ಗುಣಸಮೂಹ
ಗಳನ್ನು ಮತ್ತೊಬ್ಬನಲ್ಲಿ ಕಾಣಲು ಸಾಧ್ಯವೆ, ಆಗದು. ಹೇಗೆಂದರೆ, ಸಮಸ್ತ
ಭೂಮಂಡಲವನ್ನು ಧರಿಸಿರುವ ಆದಿಶೇಷನೆಂಬ ಮಹಾಸರ್ಪದ ಹೆಡೆಯಲ್ಲಿರುವ
ರತ್ನದ ಕಾಂತಿಯನ್ನೇನು ಮಿಂಚುಹುಳುವಿನಲ್ಲಿ ಕಾಣಬಹುದೆ, ಮುನಿಯಿಸಿದವನು



ತುಂಬ ದೊಡ್ಡವನು, ಬೇಡುವವನೆ ಬೇಡುವ ವಸ್ತು ಕಾಂಚನಗಿರಿಗಿಂತ (ಬಂಗಾರದ
ಪರ್ವತಕ್ಕಿಂತ) ಶ್ರೇಷ್ಠವೆನ್ನಿಸಿದೆ. ಆದರೇನು, ಜೀವವಿರುವವರೆಗೂ ಹೋರಾಡಿ,
ಐಶ್ವರ್ಯವಿರುವವರೆಗೂ ಕೊಟ್ಟು ಕೀರ್ತಿಯನ್ನು ಪಡೆಯಬೇಕೆಂಬ ಹಿರಿಯ ಗುರಿಯ
ದೃಷ್ಟಿಯಿರುವ ನಿನಗೆ ಸಮಾನರಾರು ಅರ್ಜುನನೆ, ಎಂದು ಹೊಗಳಿದನು.

ಅಗ್ನಿ ಮೋಸದಿಂದ ಬಂದು ಮಾತು ತೆಗೆದುಕೊಂಡನು, ಕೃಷ್ಣ ಅದರಿಂದ ತೊಂ
ದರೆಯಾಗಬಹುದಾದುದನ್ನು ಸೂಚಿಸಿದನು. ಆದರೂ ಅರ್ಜುನ ಎದೆಗುಂದದೆ
ನಡೆಸಿಕೊಡುತ್ತೇನೆಂದನು. ಕೃಷ್ಣನ ಸಹಾಯದಿಂದ ನೆಡೆಸಿಯೂ ಕೊಟ್ಟನು. ಇಲ್ಲಿ
ಅರ್ಜುನ ನಿಜಕ್ಕೂ ವೀರತ್ವದ ಪ್ರತೀಕವಾಗಿದ್ದಾನೆ.

ಸಂಧಾನಕ್ಕೆಂದು ಬಂದ ಕೃಷ್ಣ ಹಿಂತಿರುಗುವಾಗ ಕರ್ಣನ ಮನೆಗೆ ಬಂದು
'ನಮ್ಮನ್ನು ಸ್ವಲ್ಪದೂರ ಕಳಿಸಿ ಹಿಂತಿರುಗುವಂತೆ ಬಾರೋಗೋಣ' ಎಂದು ತನೊ
ಡನೆ ರಥದಲ್ಲಿ ಕೂರಿಸಿಕೊಂಡು ಹೋಗಿ, ಮುಂದೆ ಒಂದೆಡೆ ನಿಂತು "ಭೇದಿಸಲೆಂದೆ
ಹೀಗೆ ನುಡಿದರು ಎನ್ನಬೇಡ, ನಿಧಾನವಾಗಿ ಕೇಳು, ಕರ್ಣ, ನಿನ್ನನ್ನು ಹೆತ್ತ ತಾಯಿ
ಕುಂತಿ, ನಿನಗೆ ತಂದೆ ಸೂರ್ಯ, ಪಾಂಡವರು ಸೋದರರು, ಮೈದುನನೆ ನಾನು,
ಬೇರೇನು ಪ್ರತಿ ಮಾತೊ, ನಿನ್ನದು ಈ ಭೂಮಿ, ಪಟ್ಟವೂ ನಿನ್ನದೆ, ನೀನಿರಲು
ಮತ್ತೆ ಬೇರೆಯವರು ರಾಜರೇ..........ದುರ್ಯೋಧನ ನಿನ್ನನ್ನು ಯಾವುದರಲ್ಲಿ
ನಂಬಿದನೆಂದರೆ, ನೀನೊ ಅವನೂ ಒಮ್ಮೆ ಗಂಗಾನದೀ ತೀರದಲ್ಲಿ ಬೇಟೆಯಾಡುವ
ಸಂದರ್ಭದಲ್ಲಿ, ಅಲ್ಲಿಗೆ ಸಮೀಪದ ತಪೋಆಶ್ರಮದಲ್ಲಿ ಸತ್ಯಂಪರೆಂಬ ದಿವ್ಯಜ್ಞಾನಿ-
ಗಳನ್ನು ಕಂಡು ನಮಸ್ಕರಿಸಿದ. ನಿಮ್ಮಿಬ್ಬರನ್ನು ಹರಸಿ, ನಿನಗೆ ಮೊದಲಿಗೆ
ಆಸನವನ್ನು ತರಿಸಲು, ದುರ್ಯೋಧನ ಲಜ್ಜಿತನಾಗಿ, ನಿನಗೆ ಹೊರಗೆ ಹೋಗಲು
ಹೇಳಿದ. ಅವನು ಅವರನ್ನು 'ನಾನಿರಲು ನೀವು ಇದೇಕೆ ದಯೆಗೈದಿರೊ ಬೆಸ್ತರವ
ನಿಗೆ ಹೇಳಿ, ಎಂದು ಕೇಳಿದನು. ಆ ಮುನಿ ನಿನ್ನ ಜನ್ಮವೃತ್ತಾಂತವನ್ನು ತಿಳಿಸಲು,
ದುರ್ಯೋಧನ ಅದನ್ನು ನಂಬಿ, ಮುಳ್ಳಿನಿಂದಲೆ ಮುಳ್ಳನ್ನು ಕೀಳುವೆನೆಂದು ನಯ-
ದಿಂದ ವಿಶೇಷವಾಗಿ ಪೋಷಿಸಿ ಅಕ್ಕರೆಯಿಂದ ಅಂದು ಜೊತೆಯಲ್ಲಿ ಊಟಮಾಡಿ
ದನಲ್ಲವೆ' ಎಂದನು. ಕರ್ಣನ ಜನ್ಮ ವೃತ್ತಾಂತ ದುರ್ಯೋಧನನಿಗೆ ತಿಳಿದುದರ
ಬಗ್ಗೆ ಕೃಷ್ಣ ಸುಳ್ಳು ಹೇಳುತ್ತಿಲ್ಲ. ಮುಂದೆ ಕರ್ಣನು ಮರಣವನ್ನಪ್ಪಿದ ಮೇಲೆ
ದುರ್ಯೋಧನನೆ ಒಪ್ಪಿಕೊಂಡಿದ್ದಾನೆ. ಆದರೆ, ದುರ್ಯೋಧನ ನಾಚಿಕೆಯಿಂದ 'ಬೆಸ್ತ-
ರವನಿಗೆ, ಎಂದು ಬಹುಶಃ ತಿರಸ್ಕಾರದಿಂದ ಮಾತನಾಡಿಲ್ಲವೇನೊ, ಮತ್ತು ಚೆನ್ನಾಗಿ
ಮೆಲ್ಲಗೆ ಮುಳ್ಳಿನಿಂದಲೆ ಮುಳ್ಳನ್ನು ಕೀಳುವೆನೆಂಬುದನ್ನೂ ಹೇಳಿಕೊಂಡಿಲ್ಲವೇನೊ,
ನಿಜವಾಗಿ ನಡೆದುದನ್ನು ಕವಿ ಇಲ್ಲಿ ನೇರವಾಗಿ ನಿರೂಪಿಸಿಲ್ಲ, ಕೃಷ್ಣನ ಮೂಲಕ

ಮಾತ್ರವೆ ಹೇಳಿಸಿರುವುದು. ಆದರಿಂದ ಕೃಷ್ಣನ ಬಣ್ಣ ಇದರಲ್ಲಿ ಎಷ್ಟು ಸೇರಿದೆಯೊ
ತಿಳಿಯುವುದಿಲ್ಲ. ಈ ಮುನಿ ಹೀಗೇಕೆ ಮಾಡಿದನೆಂಬ ಕುತೂಹಲದಿಂದ ಮತ್ತು
ಕರ್ಣನ ವ್ಯಕ್ತಿತ್ವವನ್ನು ಕಂಡಿದ್ದ ದುರ್ಯೋಧನನಿಗೆ, ಕರ್ಣ ಯಾವುದೊ ಉನ್ನತ
ಕುಲದವನಿರಬೇಕೆಂಬ ಸಂಶಯವಿದ್ದುದರಿಂದ ಕರ್ಣನನ್ನು ಹೊರಕ್ಕೆ ಕಳುಹಿಸಿ
ಏಕೆಂದು ಕೇಳಿರಬಹುದು. ಪಾಂಡವರನ್ನು ಕಂಡರೆ ದುರ್ಯೋಧನನಿಗೆ ತುಂಬ ಅಸೂ
ಯೆ, ಕರ್ಣನ ಬಗ್ಗೆ ತುಂಬ ಸ್ನೇಹ. ಈ ವಿಚಾರವನ್ನು ಕರ್ಣನಿಗೆ ಹೇಳಿದರೆ ಇನ್ನೆಲ್ಲಿ
ಕರ್ಣನ ಪ್ರೀತಿ ಪಾಂಡವರ ಕಡೆಗೆ ಹರಿಯುತ್ತದೊ ಎಂಬ ಅಸೂಯೆ ಅವನು
ಹೇಳದಂತೆ ತಡೆದಿರಬಹುದು. ಈ ವಿಷಯ ಅವನ ಸುಪ್ತಾವಸ್ಥೆಯಲ್ಲಿ ಅಡಗಿದ್ದಿರ-
ಬಹುದು. ಕರ್ಣನ ಮರಣ ತಿಳಿದ, ಕೂಡಲೆ ಮೂರ್ಛೆಹೋದ ದುರ್ಯೋಧನ
ಎಚ್ಚೆತ್ತ ಮೇಲೆ ನಾನೇಕೆ ಇದನ್ನು ತಿಳಿಸಲಿಲ್ಲ ಎಂದು ತನಗೆ ತಾನೆ ಕೇಳಿಕೊಳ್ಳು
ತ್ತಾನೆ.

ಇದನ್ನೆಲ ಕೃಷ್ಣ ಹೇಳುತ್ತಿದ್ದಂತೆಯೆ ಕರ್ಣನಿಗೆ ಒಮ್ಮೆಯೆ ಕಣ್ಣೀರೂ
ರೋಮಾಂಚನವೂ ಹೊಮ್ಮಿತು. ಅಂತಹ ಉನ್ನತಕುಲದಲಿ ನಾನು ಹುಟ್ಟಿದ್ದೇನಲ್ಲ
ಎಂಬ ಸಂತೋಷ ಹಾಗೆ ಹುಟ್ಟಿಯೂ ನನಗೆ ಈ ಗತಿ ಬಂದಿತಲ್ಲ, ಇನ್ನು ಮುಂದೂ
ಇದನ್ನು ಯಾರೊಡನೆಯೂ ನನಗೆ ಹೇಳಿಕೊಳ್ಳುವಂತಿಲ್ಲವಲ್ಲ ಎಂಬ ದುಃಖ ಹೀಗೆ
ಎರಡೂ ಒಟ್ಟಿಗೆ ಉಂಟಾದವು ಕರ್ಣನಿಗೆ. ಈಗ ತನಗೆ ಸಹಾಯ ಮಾಡಿರುವವರು
ಸ್ವಂತ ಸೋದರರಾದ ಪಾಂಡವರಲ್ಲ, ಅವರ ದಾಯಾದಿಯಾದ ಪರಮ ಶತ್ರುವಾದ
ಕೌರವನು. ಯಾರು ತನ್ನ ಸ್ವಾಮಿಯ ಪರಮ ಶತ್ರುಗಳೊ, ಯಾರನ್ನು ತಾನು
ನಿರ್ದಾಕ್ಷಿಣ್ಯವಾಗಿ ಅವರನ್ನು ಕೊಲ್ಲಬೇಕೆಂದಿದ್ದನೊ ಅವರು ತನ್ನ ಸ್ವಂತ ಸೋದ-
ರರು. ಇವರನ್ನು ಬಿಟ್ಟು ಹೋಗುವಂತಿಲ್ಲ, ಅವರನ್ನು ಸೇರುವಂತಿಲ್ಲ.

( ಮುಂದುವರಿಯುತ್ತದೆ. )





(ಮುಂದುವರಿದ ಲೇಖನ)

# ಸಿದ್ಧರಾಮನ ತ್ರಿವಿಧಿಗಳು : ಒಂದು ವಿವೇಚನೆ

ಡಾ|| ಸಾ. ಶಿ. ಮರುಳಯ್ಯ
ರಾಗಿಣಿ : ಆರ್. ಪಿ. ಸಿ. ಬಡಾವಣೆ, ವಿಜಯನಗರ ಬೆಂಗಳೂರು.

ಎಂದು ಓಂ ನಮಃ ಶಿವಾಯ ಎಂಬ ಪ್ರಣವ ಪಂಚಾಕ್ಷರಿಯ ಔಚಿತ್ಯವನ್ನು ತಿಳಿಸಿ.

ಶ್ರೀ ಗುರುವೆ ಗತಿಯೆಂದು ಶ್ರೀ ಭಸಿತವನು ಧರಿಸಿ
ಶ್ರೀ ಶಿವಶರಣರ್ಗೆ ಭೃತ್ಯನಾದೆ
ಶ್ರೀ ಭಸಿತವೆ ನಮೋ ಎಂದು ತ್ರಿಕಾಲದಲಿ
ಧರಿಸಿ ತ್ರೈಮಲದೊಳೆದೆನ್ನೈ ಯೋಗಿನಾಥ 19

ಎಂದು ಭಸ್ಮದಿಂದಾದ ಪಾರಿಶುದ್ಧ್ಯವನ್ನು ಪ್ರಸ್ತಾಪಿಸಿ.

ಮನಕೆ ಮಂಗಳ ಮಕ್ಕು ತನುವಿಂಗೆ ಸುಖವಕ್ಕು
ವಿನಯ ಪ್ರಸಾದವು ಸಾಧ್ಯವಕ್ಕು
ಅನುವರಿದು ರುದ್ರಾಕ್ಷಿಯೂಗಮಸ್ಥಾನದಿ ಧರಿಸಿ
ತ್ರಿಣಯನನು ತಾನಕ್ಕು ಯೋಗಿನಾಥ 20

ಎಂದು ರುದ್ರಾಕ್ಷಿಯ ಹಿರಿಮೆಯನ್ನು ಎತ್ತಿ ಹಿಡಿದು, ಶಿವಯೋಗಿ ಸಿದ್ಧರಾಮನು ಅಷ್ಟವರ್ಣದ ಕಲ್ಪನೆ, ಪರಿಣಾಮುಗಳನ್ನು ಸ್ಪಷ್ಟವಾಗಿ ನಿರೂಪಿಸಿದ್ದಾನೆ. ಇದರಲ್ಲಿ ಕ್ರಿಯಾ ಯೋಗ್ಯವಾದ ಷಟ್ಸ್ಥಲ ಮತ್ತು ಪಂಚಾಚಾರಗಳೂ ಬೆರೆತಿವೆ.

ಸಿದ್ಧರಾಮಯನು ಪ್ರತಿ ಪಾದಿಸಿದ ತ್ರಿವಿಧಿಗಳಲ್ಲಿ ಮೂರನೆಯದು ಜ್ಞಾನ ಅದು ಭಕ್ತಿಗಿಂತಲೂ, ಕ್ರಿಯೆಗಿಂತಲೂ ವಿಕಾಸಗೊಂಡ ವಿಜ್ಞಾನ ಸ್ಥಲ

ಇನ್ನೇಕೆ ಭಕ್ತಿಯ ಗೊಡವೆ ನಮಗೇಕಯ್ಯ
ಇಹಪರದ ಶುದ್ಧಿ ನಮಗೇತಕಯ್ಯ
ಇನ್ನೇಕೆ ಚರಗುರುವಿನ ಮಾಟಕೂಟದ ಗೊಡವೆ
ಚನ್ನ ಬಸವಣ್ಣ ನಾದೆ ಯೋಗಿನಾಥ 21

ಇಂತಹ ನಿಲುವಿನ ಸಾಧ್ಯತೆಗೆ ಯೋಗಬೇಕು, ಶಿವಯೋಗಬೇಕು, ಅದು ಜೀವನ ಷಟ್ ಚಕ್ರಾದಿ ಗಳಲ್ಲಿನ ಪರಿಭ್ರಮಣೆ ಅಥವಾ ಆತ್ಮನ ವಿಕಾಸಸ್ಥಿತಿ. ‘ ಆಧಾರಮಂ ಬಲಿದು ಮೇಲೆ ಊರ್ಧ್ವಕ್ಕೆ ನಡೆದು ಮೇದಿನಿಯ ಕಳೆ ಮಳೆಯ ನೊಂದುಮಾಡಿ ಸಾಧಿಸಿ ಅಜರಂಧ್ರದ ಬಾಗಿಲ ತೆಗೆಸುವ ಕಾರ್ಯ; 22

‘ ಭಕ್ತಿಯೆಂಬಾ ಗಜವು ಮತ್ತವಾಗಿಯೆ ಬರೆ ವಿಚಿತ್ರ ತರವೆಂದೆನಿಪ ಮಾವ ತಿಗನು ಅಷ್ಟಾಂಗ ಯೋಗದಲಿ ಮೆಟ್ಟಿ ನಡೆಸುವ ಭೇದ ; 23

‘ ಅಂಗದೊಳಾಯತ ಲಿಂಗ ನಿರವಯದ ನಿಲವು ; ಅಲ್ಲಿ 24

ಅಱುಹಿನ ಜ್ಞಾನದ ಕುರುಹಳಿದ ಶಿವಭಕ್ತಿ
ನೆರೆಗೆ ತಾನೊಂದಾಗಿ ಕೊಡಿತೆಂದು
ಅಱಿನಱಿತು ಕುರುಹಳಿದು ಶಿವಭಕ್ತಿ ನೆರೆ ತಿಳಿದು
ಗುರುವೆ ನಾ ನೀನಾದೆ ಯೋಗಿನಾಥ 25

ಇಂತಹ ಅವಿನಾಭಾವ ಸ್ಥಿತಿ ಪ್ರಾಪ್ತವಾಗುತ್ತದೆ. ಅಲ್ಲಿನ ಸಮರಸದ ಸ್ಥಿತಿ ವರ್ಣನಾ ತೀತ ; ಬಣ್ಣಿಸ ಹೊರಟರೆ ಮಾತು ಸೋತು ಹೋದಾವು ಆ ಕಾರಣ ಅನುಭೂತ ಆತ್ಮ ಅನುಕ್ತವಾದರೂ. ಅನುಭವೈಕವಾದರೂ ಮಾತಿನ ಮಾಧ್ಯಮದಲ್ಲಿ ಸಂವಹಿಸಲುಯತ್ನಿಸಿ ಸಾರ್ಥಕ್ಯ ಪಡೆದಿದೆ.

2

ಹೀಗೆ ಸಿದ್ಧರಾಮಮ ಕೊಟ್ಟ ಭಾವ (ಭಕ್ತಿ) ಕಿಯೆ ಮತ್ತು ಜ್ಞಾನಗಳೆಂಬ ತ್ರಿ-ವಿಧಿಗಳು (the three laws) ಅನುಷ್ಠಾನ ಯೋಗ್ಯ ವಾದವುಗಳು. ಅವು ಸಾಧಕನಿಗೆ ಸಾಧನಗಳು, ಸಿದ್ಧನಿಗೆ ಸಿದ್ಧಿಗಳು, ಶರಣನಿಗೆ ಸಕಲ ಸಾಧ್ಯತೆ ಗಳು ಆಗಿವೆ. ಅವುಗಳ ಅರಿವು ಆಚರಣೆಗಳಿಂದ ಶಿವಾದ್ವೈತದ ತುರೀಯ ಸ್ತರದಲ್ಲಿ ಸರ್ವರೂ ಸ್ತಿತರಾಗ ಬಹುದು, ಶಿವರೇ ತಾವಾಗ ಬಹುದು. ಅಲ್ಲಿನ ಆ ಸಮರಸ ಸ್ಥಿತಿ ವರ್ಣನಾತೀತ .

ಪಾಲುಂಡ ಬಳಿಕ ಮತ್ತೇನಾನ ಉಂಬರೆ ?
ಪಾಲಿಂದ ಇನಿದುಂಟೆ ಎಲೆ ಪರಶಿವಾ ?
ಆ ನಿನ್ನ ಕೂಡಿದ ಆನಂದ ಸುಖಕೆ ಮ
ತ್ತೇನು ಪ್ರತಿ ಹೇಳವೆನು ಯೋಗಿನಾಥ ”



ಇಂಥೆಡೆಗಳಲ್ಲಿ ಮಾತು ಬೆಳ್ಳಿ, ಮೌನ ಬಂಗಾರ. ಆ ಅನುಭವ ಆನಂದ ಅನುಕ್ತ, ಅನನುಕರಣೀಯ. ಅದನ್ನು ಸಾಧಿಸುವ ಅರ್ಹತೆ, ಸಾದು ಸರ್ವರಿಗೂ ಬರಲಿ ಎಂಬುದೇ ಶಿವಯೋಗಿ ಸಿದ್ಧರಾಮನ ಸದಾಶಯ.

## : ಟಿಪ್ಪಣಿಗಳು :-

1. ‘ ತಿವದಿ, ತ್ರಿವಧಿ, ತ್ರಿವಿಧಿ ಎಂಬ ಪದಗಳು ‘ ತ್ರಿಪದಿ ’ ಎಂಬ ಶಬ್ದದ ತದ್ಭವ ರೂಪಗಳಾಗಿರಬೇಕು. ’ –ಡಾ. ಎಂ. ಬಿ. ಕೊಟ್ರಶೆಟ್ಟಿ, ಸಿದ್ಧರಾಮ ಶಿವಯೋಗಿ, ಪುಟ ೧೪೪. ‘ ತಿವಧಿಯೇ ಈಚಿನ ಕಾಲದಲ್ಲಿ ಪುನಃ ಸಂಸ್ಕೃತಕ್ಕೆ ತಿರುಗುವಾಗ ಜನತೆಯಬಾ ಯಲ್ಲಿ ‘ ತ್ರಿವಿಧಿ ’ ಯಾಗಿ ಪರಿಣಮಿಸಿರಬೇಕು.

–ಡಾ॥ ಡಿ. ಎಲ್. ಎನ್. ಬಸವಸ್ತೋತ್ರ ಮುನ್ನುಡಿ, ಪುಟ ೧೧

2. ವಿವರಗಳಿಗೆ ನೋಡಿ, ವಚನ ಶಾಸ್ತ್ರಸಾರ, ಸಂಪಾದಕರು-ಫ. ಗು. ಹಳಕಟ್ಟಿ
3. ಜನ್ಮ, ಜರಾ, ಮರಣಗಳೇ ತ್ರಿಪುರಗಳು. ಅವುಗಳನ್ನು ಆದಿ ತೀರ್ಥಂಕರಸ್ವಾಮಿಯು ದಹನ ಮಾಡಿದ ವೃತ್ತಾಂತ ಜೈನಕಾವ್ಯದಲ್ಲಿ ಬಿತ್ತರಗೊಂಡಿದೆ. ನೋಡಿ, ಶಿಶುಮಾಯಣನ ತ್ರಿಪುರದಹನ ಸಾಂಗತ್ಯ.
4 ಬಸವಸ್ತೋತ್ರ ತ್ರಿವಿಧಿ ೧೨೪
5 ನೋಡಿ. ಸಾ. ಶಿ. ಮರುಳಯ್ಯ, ಅಕ್ಕಗಳ ಯೋಗಾಂಗ ತ್ರಿವಿಧಿ ಒಂದು ವಿವೇಚನೆ’ ‘ ಘನ ಶ್ರೀ , ಪುಟ ೩೫೭–೯೧.
6 ಮಿಶ್ರ ಸ್ತೋತ್ರದ ತ್ರಿವಿಧಿ, ೫೪.
7 ಸಂಕೀರ್ಣ ತ್ರಿವಿಧಿ, ೫.
8 ಅದೇ ೪೦.
9 ಅದೇ, ೬೯.
10 ಅದೇ ೮೮.
11 ಪ್ರತಿಯೊಬ್ಬ ವೀರಶೈವನ ಮನೆಯಲ್ಲೂ ಒಂದು ಚೀಲ ಅಥವಾ ಜೋಳಿಗೆ ಅಥವಾ ಜೊಪ್ಪೆಯಲ್ಲಿ ‘ ಕ್ರೀಕಟ್ಟಳೆಯ , ಮೀಸಲು ಪಾತ್ರೆ, ತಟ್ಟೆ, ಚಾಪೆ, ಧಾವಳಿ, ದಿಂಬು ಇತ್ಯಾದಿಗಳನ್ನು ಪ್ರತ್ಯೇಕ ಇಟ್ಟಿರುವ ಸಂಪ್ರದಾಯ ಇದೆ,

12 ಶಿವಯೋಗಿ ಶಿವಾಚಾರ್ಯ, ಸಿದ್ಧಾಂತ ಶಿಖಾಮಣಿ IX-೯೧,
13 ಅಷ್ಟಾವರಣ ತ್ರಿವಿಧಿ, ೪೬.
14 ಅದೇ, ೫೨
15 ಅದೇ, ೯೦.
16 ಅದೇ, ೯೩.
17 ಅದೇ, ೧೦೭,
18 ಅದೇ, ೧೪೨.
19 ಅದೇ, ೧೧೪.
20 ಅದೇ, ೧೨೬,
21 ಮಿಶ್ರಸ್ತೋತ್ರದ ತ್ರಿವಿಧಿ, ೬೯
22 ಬಸವ ಸ್ತೋತ್ರದ ತ್ರಿವಿಧಿ, ೯೮.
23 ಸಂಕೀರ್ಣ ತ್ರಿವಿಧಿ, ೭೮.
24 ಬಸವ ಸ್ತೋತ್ರ ತ್ರಿವಿಧಿ, ೯೬.
25 ಸಂಕೀರ್ಣ ತ್ರಿವಿಧಿ, ೧೧೯.
26 ಅದೇ. ೧೧೩.





# (1) ಇತಿಹಾಸದ ಸ್ವಾರಸ್ಯಗಳು


ಎಚ್. ರೇವಣ್ಣ ಸಿದ್ದಪ್ಪ
ಅಧೀಕ್ಷಕರು, ಸಿದ್ಧಗಂಗಾ ಕಾಲೇಜು, ತುಮಕೂರು


## ರೆ॥ ಉತ್ತಂಗಿ ಚನ್ನಪ್ಪ:

ಧಾರವಾಡದ ರೆವೆರೆಂಡ್ ಉತ್ತಂಗಿ ಚೆನ್ನಪ್ಪನವರು ಕ್ರೈಸ್ತರು. ಅವರ ತಂದೆಯವರು ಲಿಂಗಾಯತರಾಗಿದ್ದು ಕ್ರೈಸ್ತ ಮತವನ್ನು ಸ್ವಪ್ರೇರಣೆಯಿಂದ ಸ್ವೀಕರಿಸಿದ್ದರು.

ರೆ॥ ಚೆನ್ನಪ್ಪನವರು ಸರ್ವಜ್ಞನ ವಚನಗಳ ಬಗ್ಗೆ ಅಧಿಕೃತವಾಗಿ ಮಾತನಾಡಬಲ್ಲವರಾಗಿದ್ದರು. ಅಲ್ಲದೇ ವೀರಶೈವ ಧರ್ಮದ ಬಗ್ಗೆ, ಬಸವಣ್ಣನವರ ಬಗ್ಗೆ ಆಳವಾಗಿ ತಿಳಿದು ಕೊಂಡಿದ್ದರು. ಅವರ ಬಗ್ಗೆ ಬಹಳ ಅಭಿಮಾನ ಬೆಳೆಸಿ ಕೊಂಡಿದ್ದರು.

ಒಮ್ಮೆ ಅವರ ಕ್ರೈಸ್ತ ಸ್ನೇಹಿತರು ರೆ॥ ಚೆನ್ನಪ್ಪನವರನ್ನು ಕೇಳಿದರು : " ನೀವು ಏಕೆ ಬಸವಣ್ಣನವರನ್ನು ಅವರ ವಚನ ಸಾಹಿತ್ಯವನ್ನು ಅಷ್ಟಾಗಿ ಮೆಚ್ಚಿಕೊಂಡಿದ್ದೀರಿ ? "

ಅದಕ್ಕೆ ರೆ॥ ಚೆನ್ನಪ್ಪನವರು ಹೇಳಿದರು ಬಸವಣ್ಣನವರು ಒಬ್ಬ ಶ್ರೇಷ್ಠ ಕ್ರೈಸ್ತರಾಗಿದ್ದರು. !

ಒಮ್ಮೆ ಅವರ ಲಿಂಗಾಯತ ಸ್ನೇಹಿತರು ಕೇಳಿದರಂತೆ. "ನೀವು ಏಕೆ ಲಿಂಗಾಯತ ಧರ್ಮಕ್ಕೆ ಮರಳಿ ಬರಬಾರದು ? "

ಅದಕ್ಕೆ ಅವರು ಹೇಳಿದರು "ಕ್ರಿಸ್ತನು ಒಬ್ಬ ಶ್ರೇಷ್ಠ ಲಿಂಗಾಯತರಾಗಿದ್ದರು"
(ಆಧಾರ: ಎಸ್. ಎಂ. ಅಂಗಡಿಯವರ ಲೇಖನ ಡೆಕ್ಕನ್‌ಹೆರಾಲ್ಡ್ 13-9-81)

## (2) ಮೈಸೂರಿನ ಒಡೆಯರು ಮತ್ತು ಮೂಗುಗಳ ಯುದ್ಧ

ಚಿಕ್ಕ ದೇವರಾಜ ಒಡೆಯರ ಕಾಲದಲ್ಲಿ ಮಧುರೆ ಮತ್ತು ಮೈಸೂರುಗಳ ಮಧ್ಯೆ ಒಂದು ಕದನ 1696ರಲ್ಲಿ ಜರುಗಿತು ಈ ಕದನದಲ್ಲಿ ಸೋತು ಸೆರೆಸಿಕ್ಕವರಿಗೆ ನಾಸಿಕಾ ಛೇದನ (ಮೂಗುಗಳನ್ನು ಕೊಯ್ಯುವ) ಶಿಕ್ಷೆ ಕೊಡಲಾಯಿತು. ಆದ್ದರಿಂದ ಈ ಕದನವನ್ನು ಮೂಗುಗಳ ಯುದ್ಧವೆಂದೇ ಕರೆಯಲಾಗಿದೆ.

ಆಧಾರ : ಮೈಸೂರು ಕೈಪಿಡಿ : ಶ್ರೀನಿವಾಸಮೂರ್ತಿ, ಕೃಷ್ಣ ಅಯ್ಯಂಗಾರ್,
ವಿ. ಸೀತಾರಾಮಯ್ಯ1937 ಸರಕಾರದ ಮುದ್ರಣಾಲಯ)

### (3) "ನೆಪೋಲಿಯನ್‌ನ ಖಂಡಾಂತರ ನೀತಿ"

ಇಡೀ ಯೂರೋಪಿನ ಮೇಲೆ ತನ್ನ ಪ್ರಭಾವವನ್ನು ಬೀರಿದ್ದ ನೆಪೋಲಿಯನನು ಇಂಗ್ಲೆಂಡನ್ನು ತನ್ನ ಪ್ರಭಾವಕ್ಕೆ ಒಳಪಡಿಸಲು ಅದರ ಮೇಲೆ ಆರ್ಥಿಕ ದಿಗ್ಬಂಧನೆ-ಯನ್ನು ಹಾಕಿದನು. ಇದರಿಂದ ಇಂಗ್ಲೆಂಡಿನೊಂದಿಗೆ ವ್ಯಾಪಾರ ಕಡಿದು ಹೋಯಿತು. ಆದರೆ ಕಳ್ಳಸಾಗಣಿಕೆ ಆರಂಭವಾಯಿತು. ಅದನ್ನು ತಡೆಯಲು ನೆಪೋಲಿಯನ್ನನಿಗೆ ಅಸಾಧ್ಯವಾಗಿತ್ತು. ಕಡೆಗೆ ನೆಪೋಲಿಯನ್ನನೇ ತನ್ನ ಸೈನಿಕರಿಗೆ ಕಳ್ಳಸಾಗಾಣಿಕೆಯಿಂದ ಬಂದ ಇಂಗ್ಲೆಂಡಿನ ಕೋಟುಗಳನ್ನು ಬೂಟುಗಳನ್ನು ಒದಗಿಸಬೇಕಾಯಿತು !

(ಹಿಸ್ಟರಿ ಆಫ್ ಯೂರೋಪ್ ಅರುಣ ಬಟ್ಟಾಚಾರ್ಜಿ ಪುಟ 91 ಸ್ಟರ್ಲಿಂಗ್ ಪಬ್ಲಿಷರ್ಸ್ ಡೆಲ್ಲಿ1982)

### (4)ಪ್ರೆಡೆರಿಕ್ ಮಹಾಶಯನ ಗಡಿಯಾರ

ಪ್ರಷ್ಯಾದ ರಾಜಕೀಯ ಪ್ರಾಬಲ್ಯಕ್ಕೆ ಆರ್ಥಿಕ ಅಭಿವೃದ್ಧಿಗೆ ವಿಧ್ಯಾಭ್ಯಾಸದ ಪ್ರಗತಿಗೆ ಕಾರಣನಾದ ಪ್ರೆಡೆರಿಕ್ ಮಹಾಶಯನ ಬಗ್ಗೆ ನೆಪೋಲಿಯನ್‌ಗೆ ತುಂಬಾ ಗೌರವವಿತ್ತು.

ನೆಪೋಲಿಯನ್ ಪ್ರಶ್ಯಾವನ್ನು 1806ರಲ್ಲಿ ಜಯಿಸಿದ ಮೇಲೆ ಪ್ರೆಡೆರಿಕ್ ಉಪಯೋಗಿಸುತ್ತಿದ್ದ ಕೈಗಡಿಯಾರವನ್ನು ಅವನ ನೆನಪಿಗಾಗಿ ತನ್ನಲ್ಲಿ ಇಟ್ಟು ಕೊಂಡಿದ್ದ.

ನೆಪೋಲಿಯನ್‌ನ ಆಪ್ತರೊಬ್ಬರು ಫ್ರೆಡೆರಿಕನ ಪ್ರಸಿದ್ಧ ಕತ್ತಿಯನ್ನು ಏಕೆ ತರಲಿಲ್ಲವೆಂದು ಕೇಳಿದ್ದಕ್ಕೆ ನೆಪೋಲಿಯನ್ ತನ್ನ ಬಳಿ ತನ್ನ ಪ್ರಾಬಲ್ಯಕ್ಕೆ ಸಂಕೇತ ವಾದ ಸ್ವಂತ ಕತ್ತಿ ಇದೆ ಎಂದನಂತೆ !

(ಆಧಾರ: ಅರುಣ ಭಟ್ಟಾಚಾರಿ ಹಿಸ್ಟೋರಿ ಆಫ್ ಯೂರೋಪ್ ಪುಟ 104.)

### ಭಾರತ ವಿದೇಶಾಂಗ ಸಚಿವ ಕೃಷಮೆನನ್‌ರ ದೀರ್ಘಭಾಷಣ

ಜನವರಿ 1957ರಲ್ಲಿ 24ರಿಂದ26ರವರೆಗೆ ವಿಶ್ವಸಂಸ್ಥೆಯ ಭದ್ರತಾ ಸಮಿತಿಯಲ್ಲಿ ಕಾಶ್ಮೀರ ಪ್ರಶ್ನೆಯ ಮೇಲಿನ ಚರ್ಚೆಯಲ್ಲಿ 8ಗಂಟೆಗಳಕಾಲ ಭಾಷಣ ಮಾಡಿದರು. ಮೂರು ದಿನಗಳಲ್ಲಿ ಮಾಡಲಾದಇಷ್ಟು ದೀರ್ಘಭಾಷಣವನ್ನು ಬೇರಾರೂ ಮಾಡಿರಲಿಲ್ಲ.

ಪಾಕಿಸ್ತಾನದ ವಿದೇಶಾಂಗ ಸಚಿವ ಜಫ್ರುಲ್ಲಾ ಖಾನ್‌ರು 6½ ಗಂಟೆಗಳ ಕಾಲ ಹಿಂದೆ ಭಾಷಣ ಮಾಡಿದ್ದರು.

(ಆಧಾರ: ಪ್ರಜಾವಾಣಿ ಪುಟ 4 ದಿನಾಂಕ 26-1-1957)



---

## ಸತಿ ಎಂದರೆ.........?

ಎಂ. ಎ. ನಿಲಾಂಬಿಕಾ 242-ಉತ್ತರಾದಿ ಮಠದ ರಸ್ತೆ ಮೈಸೂರು.

ಸೋದರಿ ಲಲ್ಲೇಶ್ವರಿ ಮೂಗಿ ಯವರು ಮೇ ತಿಂಗಳು ಸಿದ್ಧಗಂಗಾ ಪತ್ರಿಕೆ-ಯಲ್ಲಿ "ಸತಿಯೆಂದರೆ ಮುನಿವರೆಮ್ಮ ಶರಣರು ಏಕೆ ?" ಎಂಬ ಲೇಖನದಲ್ಲಿ ಒಂದೆರಡು ಪ್ರಶ್ನೆಗಳಿಗೆ ಉತ್ತರವನ್ನು ಅಪೇಕ್ಷಿಸಿದ್ದಾರೆ. ಆ ಸಮಸ್ಯೆಯ ಪರಿಹಾರ-ವನ್ನ ನನ್ನ ಅನಿಸಿಕೆಯನ್ನು ಪ್ರಸ್ತುತ ತಿಳಿಸುವ ಉದ್ದೇಶ ನನ್ನದು.

ಅಕ್ಕ ಕಲ್ಯಾಣದೆಡೆಗೆ ಬರುವಾಗ ಉಡುತಡಿಯಿಂದ ಕಲ್ಯಾಣದುದ್ದಕ್ಕೆ ಧರ್ಮ ಪ್ರಚಾರ ಮಾಡುತ್ತ ಬರುತ್ತಾಳೆ. ಹೀಗೆ ಜನರನ್ನು ತಿದ್ದುತ್ತ ಬರುತ್ತ ಇರುವ ಮೊಟ್ಟ ಮೊದಲ ಸ್ತ್ರಿ ಚರ ಜಂಗಮ ಆಕೆ, ಈಕೆಯ ಬಗ್ಗೆ ಅಂದು ಅನೇಕ ಜಂಗಮರು ವಿಷಯವನ್ನು ಸಂಗ್ರಹಿಸಿ ಕಲ್ಯಾಣಕ್ಕೆ ಮುಟ್ಟಿಸಿದ್ದೇ ಇರುತ್ತಾರೆ "ಪ್ರತ್ಯಕ್ಷ ಮುಕ್ತ್ಯಾಂಗನೆ ಸಕಲ ಕ್ಷೇತ್ರಂಗಳಂ ಪಾವನ ಮಾಡುವುದಂ ಕಂಡು ಕೈಮುಗಿದು ಜನರೆಲ್ಲರಂ ಕೃತಾರ್ಥಮಾಡುತ್ತ ಬರುತಿದ್ದಳೆಂದು !" ಎಂದು ಅಣ್ಣನವರಿಗೆ ಪ್ರಭುವಿಗೆ ಮೊದಲೇ ವಿಷಯ ತಿಳಿಸಿದ್ದರು. ಆದ್ದರಿಂದ ಅವಳ ನಿಲವು ಇವರಿಗೆ ತಿಳಿದಿತ್ತು.

ಅತ್ತ ಇತ್ತ ಬರುವದರಿತ ಕೆಲವು ಶರಣರು ಸಭೆಸೇರಿ ಗಂಡನ ಮೇಲೆ ತಪ್ಪ ಹೊರಿಸಿ ಬರುತ್ತಿರುವ ಅವಳಾವ ಅನುಭಾವಿ ? ಅವಳ ಪತಿಯ ಕುರುಹ ಹೇಳಿ ಅನುಭವ ಮಂಟಪಕ್ಕೆ ಅಡಿಯಿಡಲಿ ಇಲ್ಲದಿದ್ದರೆ ನಾವೇ ತೊಲಗೆನ್ನುತ್ತೇವೆ ಎಂದಿರಬೇಕು. ನಂತರ ಅಣ್ಣನವರ ಅಭಿಪ್ರಾಯದಂತೆ ಆಕೆಯನ್ನ ಕರೆತರಲು ಕಿನ್ನರಯ್ಯನನ್ನು ಕಳಿಸುತ್ತಾರೆ ಆಗ ಆ ಕೆಲಶರಣರು ಕಿನ್ನರಯ್ಯನನ್ನು ಆಕೆಯನ್ನು ಪರೀಕ್ಷಿಸಲು ಹೇಳಿದಾಗ ಆತನೂ ಆಕೆ ಶಿವಾನುಭಾವ ಸಂಪನ್ನೆ ಯಾದರೆ ಗುರು ತಾಯೆಂದ ಶಿವಶರಣೆಂಬೆನು. ದೇಹ ಲಜ್ಜಾಭಿಮಾನಿಯಾದರೆ ಸ್ತ್ರೀಯಾಗಿ ಕೈವಿಡಿವೆನೆಂದು ಹೇಳಿ ಕಲ್ಯಾಣದ ಬಾಗಿಲಲ್ಲೆ ಪರೀಕ್ಷಿಸಿ ಆಕೆಯ ನಿಲುಗೆ ಅಚ್ಚರಿಗೊಂಡು ಆಕೆಗೆ ಶರಣೆಂದು ನಮಿಸಿ. ಶರಣು ಶರಣಾರ್ಥಿ ಎಲೆ ತಾಯಿ............ನಿಮ್ಮ ದಯದಿಂದ ಹುಲಿನೆಕ್ಕೆ ಬದುಕಿದೆ ಎಂದು ಹೇಳಿ ಕಿಂಕರನಾಗಿ ತಲೆಬಾಗಿ ಅನುಭವ ಮಂಟಪ್ಪದತ್ತ ಕರೆತರುತ್ತಾನೆ. ಇದನ್ನು ನೋಡಿದ ಆ ಕೆಲವರು ಮೌನವಹಿಸುತ್ತಾರೆ.

ಬಸವಣ್ಣನರು ಆಗ ಶೂನ್ಯಸಿಂಹಾಸನಾಧಿಪತಿಯಾದ ಪ್ರಭುವನ್ನು ಕುರಿತು ಎನ್ನ ಹೆತ್ತತಾಯಿ ಮಹಾದೇವಿಯಕ್ಕ ನಿಲುವ ನೋಡಾ-ಎಂದುದಲ್ಲದೆ……… ರೂಹಿಲ್ಲದವರಿಗೆ ಬಲಿದವರಿಗೆ ತನುವಿನಹಂಗುಂಟೆ……… ಎನ್ನುತ್ತಾರೆ. ಆಕ್ಷಣ ಪ್ರಭುದೇವರು ಈ ಪ್ರಶ್ನೆ ಕೇಳುತ್ತಾರೆ.

"ಉದಮುದದ ಯೌವನವನೊಳಕೊಂಡ ಸತಿನೀನು ಇತ್ತಲೇಕೆ ಬಂದೆಯವ್ವ
ಸತಿ ಎಂದರೆ ಮುನಿವರೆಮ್ಮ ಶರಣರು
ನಿನ್ನ ಸತಿಯು ಕುರುಹ ಹೇಳಿದರೆ ಬಂದು ಕುಳ್ಳಿರು
ಇಲ್ಲದಿರೆ ತೊಲಗು ತಾಯೆ……………… ಎಂದುದಲ್ಲದೆ
ಸತಿಯರ ಗೋಷ್ಠಿ ವಿಷ ಕಾಣವ್ವ. ನಿನ್ನ ಪತಿಯ ಕುರುಹ ಹೇಳಾ ಎಲೆ ಅವ್ವಾ"
ಎನ್ನುತ್ತಾರೆ.

ಅವರು ಕೇಳುವುದು, ನೀನು ಚೆನಮಲ್ಲಿಕಾರ್ಜುನನ ಮಡದಿ ಕೈಲಾಸದತ್ತ ಹೋಗದೆ ಇತ್ತಲೇಕೆ ಬಂದೆ. ? ನೀನು ಸತಿ ಎಂದರೆ ನೀನು ಎಂಬುದನ್ನು ಸೇರಿಸಬೇಕು. ನಮ್ಮ ಶರಣರು ಕೋಪ ಗೊಳ್ಳುತ್ತಾರೆ ನೀನು ಹೇಳುವಂತೆ ಚೆನ್ನಮಲ್ಲಿಕಾರ್ಜುನನ ಮಡದಿ ಎಂಬುದನ್ನು ಅವರು ಒಪ್ಪುತ್ತಿಲ್ಲ ನಿನ್ನಂಥವರ ಸತಿಯರ ಗೋಷ್ಠಿ ವಿಷ ವೆನ್ನುತ್ತಿದ್ದಾರೆ, ಆದ್ದರಿಂದ ನಿನ್ನ ಪತಿಯಾರೆಂಬುದನ್ನು ಅವರಿಗೆ ತಿಳಿಯ ಹೇಳು. ಇಲ್ಲದಿದ್ದರೆ ಅವರೆಲ್ಲ ನಿನ್ನನ್ನು 'ತೊಲಗು, ಎಂದು ಹೇಳುತಿದ್ದಾರೆ. ಅವರಿಗೆ ಉತ್ತರ ಕೊಡಲು ನಿನ್ನಪತಿ ಯಾರೆಂದು ತಿಳಿಸಿ ಕುಳಿತಿರೊ ತಾಯೆ ಇಲ್ಲದಿದ್ದರೆ ಶರಣರು ಹೇಳಿದಂತೆ ಮಾಡು. ಎನ್ನುತ್ತಿದ್ದಾರೆ. ಪ್ರಭು ಈಮಾತು ಶರಣರ ನುಡಿಯಷ್ಟೆ ಅವರಾಗಿ ನುಡಿದುದಲ್ಲಿ ಶರಣರ ನುಡಿಯನ್ನು ಹೇಳಿದ್ದಾರಷ್ಟೆ,

ಈ ಕೆಲವು ಶರಣರಿಗೆ ಶರಣಸತಿ ಲಿಂಗಪತಿ ಎಂಬುದನ್ನು ನಿನ್ನ ಈ ವಾದ ವನ್ನು ಮನ ಮುಟ್ಟುವಂತೆ ಹೇಳು. ಎಂದು ಅಪರೋಕ್ಷವಾಗಿ ಪ್ರಭುನುಡಿದಿದ್ದಾರೆ. 'ಸತಿ, ಎಂದರೆ ಪ್ರಭುವಿಗಾಗಲಿ ಶರಣರಿಗಾಗಲಿ ಕೋಪವಿದಿದ್ದಾರೆ, ಶರಣರಾರು ಅನುಭವ ಮಂಟಪಕ್ಕೆ ಬರುವಂತಿರಲಿಲ್ಲ. ಸ್ತ್ರೀ ಸ್ವಾತಂತ್ರದ ಹರಣವಾಗು ತಿತ್ತು ನ ಸ್ತ್ರೀ ಸ್ವಾತಂತ್ರಮರ್ಹತಿ ಎಂಬುದಕ್ಕೆ ಶರಣರು ಪುಷ್ಠಿ ಕೊಟ್ಟಂತಾಗುತಿತ್ತು

ಸಂಸಾರಿಯಾದ ಬಸವಣ್ಣ ತನ್ನ ಹೆತ್ತ ತಾಯೆಂದು ಗುರುತಿಸಿದ ಹೆಣ್ಣಿನಲ್ಲಿ ಉದಮುದದ ಯೌವ್ವನವನ್ನು ಪ್ರಭು ಕಂಡನೆ ? ಎಂದಿಗೂ ಇಲ್ಲ. ನಿನ್ನ ಪತಿ ಇರುವೆಡೆ ಇರಬೇಕಾದವಳು ನೀನು ಎಂದು ಶರಣರು ಹೇಳಿತಿದ್ದನ್ನು ಕಂಡು ಎಚ್ಚ



-ರಿಸಿದ್ದಾನೆ. ನೀನು ಮದುವೆಯಾಗಿ ತಪ್ಪು ಹೊರಸಿ ಬಂದುದು ನಿಜವೇ ? ಎಂದು ಕೇಳಿದ್ದು ಕೂಡ ಕೆಲವರು ಇಂತೆನ್ನುತ್ತಾರೆ ರೆಂದಷ್ಟೆ ಮುಂದಿನ ಪ್ರಶ್ನೆಗಳು ಶರಣ -ಸತಿ ಲಿಂಗಪತಿ ವಾದವನ್ನು ಹೇಗೆ ಪುಷ್ಠಿಕರಿಸುತ್ತಾಳೆಂಬುದಕ್ಕೆ ಹಾಕಿದ ಪ್ರಶ್ನೆಗಳು. ಇದುಕೂಡಕೆಲವು ಶರಣರು ಕೇಳಿದಪ್ರಶ್ನಗಳೆ ಅವರುಕೇಳಿದ ಪ್ರಶ್ನೆಗಳಿಗೆ ಸಮಂಜಸ-ವಾದ ಉತ್ತರ ಕೊಟ್ಟ ಮೇಲೆ ತಾಯಿ ನಿನ್ನನ್ನು ಮೆಚ್ಚಿರುವೆ ನನಗೆ ನಮಿಸು-ಬಾ " -ಎನ್ನದೆ ಲಿಂಗ, ವಯಸ್ಸು ಅಂತರವನ್ನು ಮರೆತು ಆ ಸ್ತ್ರೀ ಜಂಗಮಕ್ಕೆ ನಮೋ ನಮೋ ಎನ್ನುತ್ತಾನೆ ಪ್ರಭುದೇವ. ಶರಣರೆಲ್ಲ ಆಶ್ಚರ್ಯಗೊಳ್ಳುವಂತೆ-ಮಾಡಿದ್ದಾನೆ ಒಬ್ಬ ಜಂಗಮ ಇನ್ನೊಬ್ಬ ಜಂಗಮಕ್ಕೆ ಕೊಟ್ಟ ಗೌರವವಿದು. ಇಲ್ಲಿ ಹೆಣ್ಣಿನ ಬಗ್ಗೆ ತಾತ್ಸಾರವಾಗಲಿ ಕೀಳಿರಮ ಭಾವನೆಯಾಗಲಿ ಇಲ್ಲ, ಚೆನ್ನಮಲ್ಲಿ ಕಾರ್ಜನನ ಸತಿಗೆ ಉತ್ತಮವಾದ ಗೌರವವನ್ನು ಸಲ್ಲಿಸಿದ್ದಾನೆ ಪ್ರಭು.

ಪ್ರಭು ಅಕ್ಕನ ಸಂವಾದ ಕೇಳಿ ಶರಣ ಸತಿ, ಲಿಂಗಪತಿ. ಭಾವಕೇಳಿ ಶರಣರು ತಲೆಬಾಗಿ ಕೈಮುಗಿದು ನಿಂತಿರಬೇಕು. ಪ್ರಭುವೆ " ಗುಹೆಶ್ವರ ಲಿಂಗದಲ್ಲಿ ಎರಡು-ನಾಮವಳಿದೆ ಎಂದಾಗ ಆ ಕೆಲವರು ಪಾತಾಳಕ್ಕಿಳಿದಿಕಿರಬೇಕು ಇದನ್ನು ಪುಷ್ಠೀಕ -ರಿಸುವುದಕ್ಕೆ ಮುಂದೆ ಅಣ್ಣನ ವಚನ ಕೇಳಿ. ಹೆಂಗೂಸಿನ -ವಂಗನ ನೋಡಿರೇ ಪುರಾತನರು……… ".ಎಂಬ ವಚನದಲ್ಲಿ ಸಾರಿ ಹೇಳಿದ್ದಾರೆ ಬಸವಣ್ಣ ಇನ್ನು ಚನ್ನಬಸವಣ್ಣನಂತೂ

'ಅಜ ಕೋಟಿ ವರುಷವಾದವರೆಲ್ಲ ಹಿಯರೆ……ಎನ್ನುತ್ತ ನಮ್ಮ ಈ
ಹಿರಿಯತನ ಮಹದೇವಿಯಕ್ಕಂಗಾಯಿತ್ತು ಎನ್ನುತ್ತಾರೆ.

" ಸತಿಯರ ಗೊಷ್ಠಿ ವಿಷ ಎಂಬ ಬಾವ ಇಷ್ಟಾದರೆ ಪ್ರಭು ಇಷ್ಟು-ಪ್ರಶ್ನೆ ಕೇಳಿ ಕಾಲಹರಣ ಮಾಡುತ್ತಿರಲಿಲ್ಲ ಅನುಭವ ಮಂಟಪದ ಬಾಗಲಲ್ಲೆ ನಿಲ್ಲಿಸಿ ತೊಲಗೆನ್ನುತ್ತಿದ್ದು ಜ್ಞಾನದೃಷ್ಟಿಯಿಂದ ನೋಡಿದ ಪ್ರಭುವಿಗೆ ಅಕ್ಕನ ನಿಲುವು ಗೊತ್ತಿತ್ತು- ಶೂನ್ಯಸಂಪಾದನೆಯಲ್ಲಿ ನಿರೂಪಿತವಾಗಿದೆ, ಇದು ಸತಿಯ ಬಗ್ಗೆ ಎಲ್ಲ ಶರಣರಿಗೂ ಸರ್ವರಿಗೂ ನಿಷ್ಟೆ ತಿಪಯ ಮೇಲೆ ತಪ್ಪು ಹೊರಿಸಿ ಬಂದಿದ್ದಾಳೆಂದು ತಿಳಿದಿದ್ದ ಕೆಲವು ಶರಣರು ಆಗ ಕೋಪಗೊಂಡಿರಬೇಕು. ಅವಳ ನಿಲುವರಿತಾಗ ಎಲ್ಲರೂ ತಲೆಬಾಗಿ ನಿಂತಿದ್ದರೆ ತಪ್ಪನ್ನು ತಿದ್ದಿಕೊಂಡಿದ್ದಾರೆ. ಆ ಶರಣರ ತಿದ್ದಲು ಪ್ರಭು ಕೇಳಿದ ಪ್ರಶ್ನೆ ಮಾಲೆ ಇದು.

ಹೆಣ್ಣಿಗೆ ಬಸವಣ್ಣನ ಕಾಲದಲ್ಲಿ ಸಂದ ಗೌರವ ಭಾರತದಲ್ಲಾಗಲಿ, ಪ್ರಪಂಚ-ದಲ್ಲಾದಲ್ಲಿ ಯಾವ-ಯುಗದಲ್ಲಿ ಹಿಂದೆ ಸಂದಿಲ್ಲ. ಮುಂದೆ ಸಲ್ಲುತ್ತದೆಯೆ ? ಆಶೆ ಕಂಗಳಿದನೋಡಬೇಕಷ್ಟು—ಮುಂದೆ ಸಲ್ಲುವುದೂ ಇಲ್ಲ.

# ಹಿಂದೂ ಸಮಾಜದಲ್ಲಿ-ಸ್ತ್ರೀ-ಒಂದು ವಿವೇಚನೆ.

ಲೇಖಕ:- ಎನ್. ಸಿದ್ದಲಿಂಗಯ್ಯ ಎಂ.ಎ,ಬಿ.ಇಡಿ.

"ಎಲ್ಲಿ ನಾರಿಯುರನ್ನು ಪೂಜ್ಯ ದೃಷ್ಟಿಯಿಂದ ಕಾಣುವರೋ ಅಲ್ಲಿ ದೇವತೆಗಳು ಸುಪ್ರೀತರಾಗುವರು. ಎಲ್ಲಿ ಅವರನ್ನು ಅಗೌರವದಿಂದ ಕಾಣುವರೋ ಅಲ್ಲಿ ಪುರುಷರು, ಮಾಡುವ ಕರ್ಮವೆಲ್ಲ ನಿಷ್ಫಲವಾದಂತೆ. ಎಲ್ಲಿ ನಾರಿಯರು ಕಂಬನಿಗರೆಯುವರೋ ಆ ಕುಲವೆ ನಾಶವಾದಂತೆ, ಎಲ್ಲಿ ಅವರು ಆನಂದದಿಂದ ಇರುವರೋ ಆ ಕುಲ ವೃದ್ಧಿಯಾಗುವುದು" ಎಂದು ಮನು ಹಲವು ಶತಮಾನಗಳ ಹಿಂದೆ ಸಾರಿದನು,

ಸ್ತ್ರೀ ನಮ್ಮೆಲ್ಲರನ್ನು ಜಗತ್ತಿಗೆ ತಂದ ತಾಯಿ, "ಮಾತೆ" 'ಮಾತೆಗಿಂತ-ಮಿಗಿಲಾದ ದೇವರಿಲ್ಲ, ಎಂಬುದು ನಿಶ್ಚಯ. ಸೃಷ್ಟಿಯ ಭಾರವನ್ನೇ ಹೊತ್ತ ಮಾತೆ, ಭೂಮಿಯಂತೆ ಕ್ಷಮಾಗುಣವುಳ್ಳವಳು, ಸಂಸಾರ, ಸಮಾಜ ಮತ್ತು ದೇಶದ ಅಭಿವೃದ್ದಿಗೆ ಸ್ತ್ರೀಯೇ ಕಾರಣಳು; ಅಧೋಗತಿಗೂ ಈಕೆಯೇ ಕಾರಣಳು. ಮನೆಗೆ ಹಿತಕಾರಿಯಾಗಿ, ಪರರಿಗೆ ಉಪಕಾರಿಯಾಗಿ ಸಂಸಾರದ ಕೇಂದ್ರ ವ್ಯಕ್ತಿಯಾಗಿ, ಸಮಾಜದ ದಾರಿದೀಪವಾಗಿದ್ದಾಳೆ, ಆಕೆಯಲ್ಲಿರುವಷ್ಟು ಪ್ರೀತಿ ಮತ್ತೆಲ್ಲಿಯೂ ಕಾಣಬರುವುದಿಲ್ಲ ಅವಳೊಬ್ಬ ಮಹಾತ್ಯಾಗಿ, ಸಹಿಷ್ಣತಾ ಮೂರ್ತಿ, ಆಕೆ ಮಹಾ-ತಪಸ್ವಿನಿ. ಜಗತ್ತಿಗೆ ಯತಿ, ಚಕ್ರವರ್ತಿಗಳನ್ನು, ಕ್ಷಾತ್ರಪುಂಗವರನ್ನು, ಪುರುಷ-ಸಿಂಹರನ್ನು ದಾನ ಮಾಡಿದವಳು. ಈಕೆ ಹಿಂದೂ ಸಮಾಜದಲ್ಲಿ ಮೊದಲಿನಿಂದಲೂ ಪುರುಷನಷ್ಟು ನಮ್ಮೆದುರಿಗೆ ಎದ್ದು ಕಾಣುವುದಿಲ್ಲ. ಆದರೆ ಈಕೆ ಅಷ್ಟು ಪ್ರಾಮುಖ್ಯಳಲ್ಲ ಎನ್ನಲಾಗುವುದಿಲ್ಲ, ಹೆಣ್ಣಿನ ಹಿರಿಮೆಯ ಬಗ್ಗೆ ಸಂಚಿಹೊನ್ನಮ್ಮ ಹೇಳುವ ಮಾತು "ಪೆಣ್ಣಲ್ಲವೆ ತಮ್ಮನೆಲ್ಲ ಪಡೆದ ತಾಯಿ ಪೆಣ್ಣಲ್ಲವೆ ಪೊರೆದವಳು ಪೆಣ್ಣು-ಪೆಣ್ಣಿಂದೇತಕೆ ಬೀಳುಗಳೆವರು ಕಣ್ಣುಕಾಣದ ಗಾವಿಲರು"

ತನ್ನೆದೆಯ ರಕ್ತವನ್ನೆಲ್ಲಾ ಹಾಲು ಮಾಡಿ ಉಣಿಸುವವಳು, ನಮ್ಮ ಪೋಷಣೆಯಲ್ಲಿ ಅವಳ ಸುಖವನ್ನೇ ಮರೆಯುವವಳು. ಯಾವ ಪ್ರತಿ ಫಲವನ್ನೂ ನಿರೀಕ್ಷಿಸದೆ ತಮ್ಮನ್ನು ಹರಸಿ ಜಗತ್ತಿನ ಕಾರ್ಯರಂಗಕ್ಕೆ ಕಳುಹಿಸುವಳು. ನಮ್ಮ ಶೀಲ, ಭವಿಷ್ಯ ಜೀವನದ ಆದರ್ಶ ಬೀಜಗಳನ್ನು ನಮ್ಮ ಎಳೆ ಎದೆಯಲ್ಲಿ ಬಿತ್ತುವವಳು. ಬಾಲಕ-ರಾಗಿದ್ದಾಗ ನಮ್ಮನ್ನು ಮಲಗಿಸಲು ಹಾಡುತ್ತಿದ ಜೋಗುಳದ ಹಾಡುಗಳು, ವಿರಾಮವಾದಾಗ ಅವಳು ಹೇಳುತ್ತಿದ್ದ ಕಥೆಗಳು, ನಾವು ತಪ್ಪು ಮಾಡಿದಾಗ ಎದೆನೊಂದು ಹೇಳುತ್ತಿದ್ದ ಬುದ್ಧಿವಾದ, ಇವೇ ನಾವು ಮುಂದೆ ಕಟ್ಟುವ ಜೀವನದ ಸೌಧಕ್ಕೆ ತಳ-ಹದಿ. ನಾವು ವಯಸ್ಸಾದ ಮೇಲೆ ಕಲಿಯುವ ವಿದ್ಯೆಯೆಲ್ಲ, ಕೇಳುವ ಬುದ್ಧಿವಾದವೆಲ್ಲ, ಆಗಲೆ ಆಕೆ ಬಾಲ್ಯದಲ್ಲಿ ನೆಟ್ಟ ಬೀಜಕ್ಕೆ ನೀರನ್ನು ಎರೆದಂತೆ.

ಮಾನವ ಇತಿಹಾಸವನ್ನು ಅವಲೋಕಿಸಿದಾಗ ಅವನ ಅಲೆಮಾರಿ ಜೀವನ ಮೊದಲಘಟ್ಟ. ಈ ಸಂದರ್ಭದಲ್ಲಿ ಮಾತೃಪ್ರಧಾನ ಕುಟುಂಬ ವ್ಯವಸ್ಥೆ ರೂಢಿಗೆ ಬಂತು ಎಂದು ಸಮಾಜಶಾಸ್ತ್ರಜ್ಞರ ಅಭಿಪ್ರಾಯ.

ಎರಡನೆಯ ಹಂತದಲ್ಲಿ ಆಹಾರ ಸಂಗ್ರಹಣೆಯೂ, ಅದಕ್ಕೆ ಬೇಕಾದ ಉಪಕರಣಗಳ ತಯಾರಿಕೆಯೂ, ಪಶುಪಾಲನೆಯೂ, ಗಂಡಸಿನ ಪಾಲಿಗೆ ಬಂದರೆ, ಮಕ್ಕಳ ಪಾಲನೆ ಆಹಾರ ಸಿದ್ಧಮಾಡುವುದು, ಆಹಾರ ಶೇಖರಣೆ ಹೆಂಗಸಿನ ಪಾಲಿಗೆ ಬಂದವು.

ಅರ್ಯರು ಭಾರತಕ್ಕೆ ಬಂದಾಗ ಅವರಲ್ಲಿಯೂ ಈ ವ್ಯವಸ್ಥೆಯೇ ಜಾರಿಯಲ್ಲಿತ್ತು. ಕ್ರಮೇಣ ಮಾತೃ ಪ್ರಧಾನ ಕುಟುಂಬದ ಇಳಿಮುಖವು ಸ್ತ್ರೀಯ ಮೊದಲಪರಾಜಯ ಎಂಬ ಮಾತು ನಿಜವಾದದ್ದು, ಮೊದಲು ಮನೆಯಲ್ಲಿ ಹೆಣ್ಣಿನ ಶಕ್ತಿಯನ್ನು ಕುಟುಂಬದ ರಕ್ಷಣೆಗಾಗಿ ಬಳಸಿಕೊಳ್ಳುತ್ತಿದ್ದ ಯಜಮಾನ ಬೇರೆಯವರ ಶಕ್ತಿಯನ್ನು ತನ್ನ ಹಿತಕ್ಕಾಗಿ ಬಳಸಿಕೊಳ್ಳಲು ಆರಂಭಿಸಿದನು. ಗಂಡಸು ಸರ್ವಾಧಿಕಾರ ಪಡೆದು ಹೆಣ್ಣು ಅವನಿಗೆ ಅಧೀನಳಾಗುವಂತೆಆಯಿತು. ಕುಟುಂಬದಲ್ಲಿ, ಸಮಾಜದಲ್ಲಿ, ಹೆಣ್ಣಿನ ಶೋಷಣೆತೆ ಆರಂಭವಾಯಿತು. ಕುಟುಂಬದಲ್ಲಿ ಗಂಡಸಿನ ಪ್ರಾಬಲ್ಯ ಹೆಚ್ಚಾದಾಗ ಹೆಣ್ಣು ಮೂಲೆ ಗೊತ್ತರಿಸಲ್ಪಟಳು, ಯಾವ ಆರ್ಥಿಕ ಕ್ರಿಯೆಯಲ್ಲೂ ಭಾಗವಹಿಸದಿದ್ದ ಹೆಣ್ಣಿಗೆ ಮುಂದೆ ಯಾವ ಬೌದ್ಧಿಕ ಕ್ರಿಯೆಯಲ್ಲೂ ಪಾಲು ದೊರೆಯಲಿಲ್ಲ. ವಿದ್ಯಾರ್ಜನೆ ಹೆಣ್ಣಿಗೆ ಅನವಶ್ಯಕ ಎಂದುಕೊಂಡು ಆದರಿಂದಲೂ ಅವಳನ್ನು ದೂರವಿಟ್ಟರು ಸಮಾಜದ ಎಲ್ಲ ವ್ಯತ್ಯಾಸಗಳನ್ನು, ಸ್ಥಿತಿಗತಿಗಳನ್ನು ಇದೇ ಜಗತ್ತಿನ ಸತ್ಯ ಎಂದು ಪ್ರತಿಪಾದಿಸಲು ಹುಟ್ಟಿಕೊಂಡ ಎಲ್ಲ ಧರ್ಮಶಾಸ್ತ್ರಗಳೂ ಹೆಣ್ಣಿನ ಈ ಸ್ಥಾನವನ್ನು ಖಚಿತ ಗೊಳಿಸಲು ಸಹಾಯಕವಾದವು.

ಸ್ತ್ರೀ ಎಲ್ಲಾ ವಿಧದಲ್ಲೂ ಗಂಡಸಿಗೆ ಅಡಿಯಾಳಾಗಿ ಇರಬೇಕಾದುದ್ದು ಸಂಸ್ಕೃತಾನುಕರಣ ತತ್ವದ ಒಂದು ಅವಿಭಾಜ್ಯಅಂಶವಾಗಿತ್ತು. ಧರ್ಮಶಾಸ್ತ್ರ ಕಾರನಾದ 'ಮನು' ಇದನ್ನು ಸ್ಪಷ್ಟವಾಗಿ ಹೇಳಿದ್ದಾನೆ. "ತನ್ನ ಜೀನನದ ಪ್ರತಿ ಹಂತದಲ್ಲೂ ಸ್ತ್ರೀ ಪುರುಷರಿಗೆ ಅವಲಂಬಿ, ಮದುವೆಯವರೆಗೆ ತಂದೆಯ ಅಂಕೆಯಲ್ಲಿ; ಆಮೇಲೆ ಗಂಡನ ಕೈಕೆಳಗೆ; ಗಂಡ ತೀರಿಹೋದ ಮೆಲೆ ತನ್ನ ಗಂಡು ಮಕ್ಕಳ ಆಶ್ರಯದಲ್ಲಿ. ಹೆಂಡತಿಯು ಗಂಡನಿಗೆ ವಿಧೇಯಳಾಗಿ ಇರಬೇಕಾದ ಅಂಶಕ್ಕೆ

ಕಾಲದಲ್ಲೂ ವಿದ್ಯಾವಂತ ಸ್ತ್ರೀಯರಿದ್ದರೆಂದು ತಿಳಿದು ಬರುತ್ತದೆ. ವೈದಿಕ, ಜೈನ,
ಭೌಧಯುಗಗಳಲ್ಲಿ ಮಹಿಳೆಯರು ಸಾಧಿಸಿದ ಆತ್ಮೋನ್ನತಿ, ಧರ್ಮಜಾಗೃತಿ, ಸಾಹಿತ್ಯ
ನಿರ್ಮಿತಿಗಳು ಚಿರಸ್ಮರಣೀಯವಾಗಿವೆ. ಮಹಿಳೆಯರ ವ್ಯಕ್ತಿತ್ವ ವಿಕಾಸಕ್ಕೆ ಅವಕಾಶ
ದೊರೆತಾಗಲೆಲ್ಲ ಅವರು ತಮ್ಮ ಪ್ರತಿಭೆಯ ಬೆಳಕನು ಬೀರಿದ್ದಾರೆ. ಈ ಮಾತಿಗೆ
ಹನ್ನೆರಡನೆಯ ಶತಮಾನದ—ಶಿವಶರಣೆಯರ ಸಾಧನೆಯು ಮಹತ್ವದ ಉದಾಹರ
ಣೆಯಾಗಿದೆ.

ಬಲವಂತದಿಂದ ಸಮಾಜವು ಎಂದು ಸ್ತ್ರೀಯರನ್ನು ಸಂಬುಮಿಗಳನ್ನಾಗಿ ಮಾಡಲು
ಉಪಕ್ರಮಿಸಿತೋ ಅಂದಿನಿಂದಲೇ ಅನೇಕ ನ್ಯೂನಾತಿರೇಕಗಳು ನಮ್ಮ ಸಮಾಜದಲ್ಲಿ
ತಲೆದೋರಿದವು ಪತಿಯ ಆಸರೆಯಿಲ್ಲದೆ ಬಾಲ್ಯದಲ್ಲಿಯೇ ಅವನನ್ನು ನೀಗಿಕೊಂಡು
ಜಗದಲ್ಲಿ ಬಾಳನ್ನು ಹೊರುತ್ತಿರುವಾಗ ಒಮ್ಮೆ ಎಡವಿದರೆ ಸಾಕು ಸಮಾಜದಲ್ಲಿ
ಕಟು ನಿಂದೆಗೆ ಈಡಾಗುತ್ತಿದ್ದರು. ಬಲಾತ್ಕಾರದಿಂದ ಪುರುಷನಾಗಲೀ ಸ್ತ್ರೀಯಾಗಲೀ
ಇಂದ್ರಿಯಗಳನ್ನು ನಿಗ್ರಹಿಸಲಾರರು. ಇಂದ್ರಿಯಗಳನ್ನು ನಿಗ್ರಹಿಸಬೇಕೆಂಬ ಇಚ್ಛೆ
ತಮ್ಮ ಅಂತರಾಳದಿಂದ ಬರಬೇಕು ಸಮಾಜದ ಕಟ್ಟು-ಪಾಡುಗಳ ಪಂಜರದಲ್ಲಿರು-
ವಾಗ ತೋರಿಕೆಗೆ ಅವರು ಸಾಧುವಾಗಿ ತೋರಬಹುದು. ಆದರೆ ಅದರಿಂದ ಅವರ
ಮನಸ್ಸಿನ ಮೇಲೆ ನಂತರ ಸಮಾಜದ ಮೇಲೆ ಘೋರ ಪರಿಣಾಮ
ಉಂಟಾಗುತ್ತ.

ಭಾರತದ ಇತಿಹಾಸವನ್ನು ಅವಲೋಕಿಸಿದಾಗ ಸ್ತ್ರೀಯರನ್ನು ಉದ್ದಕ್ಕೂ ಕಡೆ
ಗಣಿಸಿದ್ದೇ ಆಗಿದೆ. ಹೆಣ್ಣು ಮುಖ್ಯವಾಗಿ ಹೆಂಡತಿ ಮತ್ತು ತಾಯಿ ; ಹೆಂಡತಿ-
ಯಾಗಿ ಮಕ್ಕಳನನ್ನು ಹೆರಬೇಕು. ಗಂಡನ ವಂಶಾಭಿವೃದ್ಧಿ ಮಾಡಬೇಕಾಗಿದ್ದಿತು
ಈ ದಿಶೆಯಲ್ಲಿ ಆಕೆ ವಿಫಲಳಾದರೆ ಆಕೆಯನ್ನು ಬದಿಗೊತ್ತಿ ಇನ್ನೊಬ್ಬಳನ್ನು ಕೈಹಿಡಿ-
ಯುವ ಹಕ್ಕು ಗಂಡನದಾಗಿತ್ತು ಗಂಡು ಮುಖ್ಯವಾಗಿ ಹೆಣ್ಣನ್ನು ನೋಡಿಕೊಂಡು
ಬಂದ ಬಗೆ ಇದು. ಅವಳದೇ ಆದ ಬೌದ್ಧಿಕ ಜೀವನವೊಂದು ಸಾಧ್ಯ ಎಂಬುದನ್ನು
ಸಂಪೂರ್ಣವಾಗಿ ಅಲಕ್ಷಿಸಿದರು. ಅದರ ಜೊತೆಯಲ್ಲಿಯೇ ಸ್ತ್ರೀಯರಿಗೆ ಉಪನಯನ
ಸಂಸ್ಕಾರವನ್ನು ನಿರಾಕರಿಸಿ ಅವಳು ಶೂದ್ರರಂತೆಯೇ ವೇದಾಧ್ಯಯನಕ್ಕೆ ಅನರ್ಹ-
ಳೆಂದು ಭಾವಿಸಿದರು ಸ್ತ್ರೀಯರಿಗೆ ವಿವಾಹವು ಉಪನಯನಕ್ಕೆ ಸಮವೆಂದು ಹೇಳಿ-
ದರು, ಜ್ಞಾನ ಸಾಧನೆ ಅಗತ್ಯವಿಲ್ಲವೆಂದು ಭಾವಿಸಲಾಗಿದೆ. 'ಮನವು ಸ್ತ್ರೀಯು
ಸ್ವಾತಂತ್ರ್ಯಕ್ಕೆ ಅನರ್ಹಳು ಎಂದು ತೀರ್ಮಾನ ಕೊಟ್ಟಿದ್ದಾನೆ. ಅವಳ ಕಾರ್ಯಕ್ಷೇತ್ರ



ಅತಿ ಎನ್ನಿಸುವಷ್ಟರ ಮಟ್ಟಿಗೆ ಮಹತ್ವ ನೀಡಲಾಯಿತು. ಗಂಡನೇ ದೇವರು, ಯಜ
ಮಾನ, ಆತನ ಅವಿರತಸೇವೆ, ಆತನನ್ನು ಸದಾ-ಸಂತೃಪ್ತಿಯಲ್ಲಿ ಇರುವಂತೆ ಮಾಡು
ವುದು ಹೆಣ್ಣಿನ ಅತ್ಯುಚ್ಚಧ್ಯೇಯ " ಎಂದು ಸಾರಲಾಯಿತು. ಅವಳು ವಿಧೇಯಳಾಗಿ
ಶುದ್ಧ ಚಾರಿತ್ರ್ಯಕ್ಕೆ ಹೆಸರಾಗಿ ಇರಬೇಕಾಗಿತ್ತು. ಇವಕ್ಕೆ 'ಪತಿ ಪರಾಯಣಿ'
ಅಥವಾ 'ಪತಿವ್ರತೆ' ಎಂದು ಕರೆದರು. ಗಂಡ ದಾರಿತಪ್ಪಿದಾಗಲೂ, ಹೆಂಡತಿಯ
ಶ್ರದ್ಧೆ ಅಚಲವಾಗಿರಬೇಕಾಗಿತ್ತು. ತನ್ನ ಒಳ್ಳೆಯತನದಿಂದ ನಿರ್ವ್ಯಾಜ ಸೇವೆಯಿಂದ
ಆತನನ್ನು ಉತ್ತಮನನ್ನಾಗಿ ಮಾಡುವುದು ಆಕೆಯ ಹೊಣೆಯಾಗಿದ್ದಿತು. ಆತನಿ-
ಗಿಂತ ಮೊದಲು ಸಾಯುವುದು, ಸುಮಂಗಲಿಯಾಗಿ ಸಾಯುವುದು, ಆಕೆಯ
ಪರಮೋಚ್ಚ ಧ್ಯೇಯ. ಸುಮಂಗಲಿಯಾಗಿರುವಾಗ ಬರುವ ಸಾವು ಹಿಂದಿನ ಜನುಮ
ದಲ್ಲಿ ಮಾಡಿದ ಸುಕೃತಗಳಿಗೆ ಸಾಕ್ಷಿ: ಹಾಗೆಯೇ ಹಿಂದಿನ ಜನುಮದ ಪಾಪದ
ಪರಿಣಾಮವೇ ವೈಧವ್ಯ; ಸಾಮಾಜಿಕವಾಗಿ ಹಾಗೂ ಧಾರ್ಮಿಕವಿಧಿ ಸಂಸ್ಕಾರಗಳ
ನೆಲೆಯಲ್ಲಿ ವಿಧವೆಯರನ್ನು ತುಚ್ಛವಾಗಿ ಕಾಣಲಾಗುತ್ತಿತ್ತಲ್ಲದೆ, ಬಂಧು-ಬಳಗದವರ
ಕೈಯಲ್ಲಿಯೂ ಆಕೆ ಸಿಕ್ಕುಬಿದ್ದ ಅಭಿಮಾನಭಂಗಳಾಗಿ ಬಾಳು ಸವೆಸ ಬೇಕಾಗುತ್ತಿತ್ತು.

ವೇದ, ಉಪನಿಷತ್ತು, ಪುರಾಣಯುಗಗಳಲ್ಲಿ ಹೆಣ್ಣಿಗೆ ಅತ್ಯಂತ ಗೌರವದ
ಸ್ಥಾನ ದೊರಕಿತ್ತು. ಆಗಲೂ ಕೂಡ ಅವರಿಗೆ ವೇದ ಕಾಲದಲ್ಲಿ ಇದ್ದಂತೆ ಉಪ-
ನಯನ, ಸಂಸ್ಕಾರ, ವೇದಾಧ್ಯಯನ, ಯಾಗ, ಯಜ್ಞಗಳನ್ನು ಮಾಡಲು ಅಧಿಕಾರ
ವಿತ್ತು. ಭಾರತದ ನಾರಿಯರ ಆದರ್ಶಶೀಲವೆಂತಹುದು ಎಂಬುದನ್ನು ನಾವು
ರಾಮಾಯಣದಲ್ಲಿ ಸೀತೆಯ ಶೀಲದಲ್ಲಿ ಕಾಣುವೆವು, ವ್ಯಾಸರು ಮಹಾಭಾರತದಲ್ಲಿ
ರಾಜಕೀಯ ಪ್ರಧಾನ ಮೂರ್ತಿಯಾದ ದ್ರೌಪದಿಯನ್ನು ಚಿತ್ರಿಸುವರು. ದ್ರೌಪದಿ
ತನ್ನ ಪೌರುಷದ ಮಾತಿನ ಸಲಾಕೆಯಿಂದ ಪಾಂಡವರ ಗೊಡ್ಡು ವೈರಾಗ್ಯದ : ಬೂದಿ
ಯನ್ನು ಛಲದ ಬಿರುಗಾಳಿಯಿಂದ ಊದುವಳು. ಅಧರ್ಮಿಗಳಾದ ಕೌರವರ ಕುಲ-
ನಾಶಕ್ಕೆ ಮೂಲ ಪ್ರಜೋದನಾ ಶಕ್ತಿಯಂತೆ ಇದ್ದವಳು.

ಕಾಳಿದಾಸಾದಿ ಕವಿಗಳ ಕಾವ್ಯಗಳಲ್ಲಿ ಬರುವ ನಾಯಕಿಯರು ವಿದ್ಯಾವಂತೆಯ.
ರಾಗಿದ್ದರು. ಶಕುಂತಲೆ ತನ್ನ ಪ್ರಿಯತಮನಿಗೆ ಪ್ರೇಮದ ಪತ್ರವನ್ನು ಬರೆಯುವಳು
ಮೇಘದೂತದಲ್ಲಿ ಕಥನಾಯಕಿ ವಿರಹದಿಂದ ಪರಿತಪಿಸುವಾಗ ಪ್ರಿಯತಮನ ನೆನಪು
ಗಳನ್ನು ತರುವ ಕವನಗಳನ್ನು ಬರೆಯುತ್ತಿದ್ದಳೆಂದು ಕವಿ ಹೇಳುತ್ತಾನೆ. ರಾಜ-
ಶೇಖರನ ಕಾವ್ಯಮೀಮಾಂಸದಲ್ಲಿ ಕೂಡ ಅನೇಕ ವಿದ್ಯಾವತಿಯರ ಹೆಸರಿವೆ. ಬೌದ್ಧ
ಧರ್ಮದ ಪ್ರಾಬಲ್ಯ ಸ್ಥಿತಿಯಲ್ಲೂ ಅನೇಕ ವಿದ್ಯಾವಂತ ಮಹಿಳೆಯರು ಬೌದ್ಧ ಧ-
ರ್ಮಕ್ಕೆ ಸೇರಿದ್ದರು. ಬೌದ್ಧಧರ್ಮದ ನಂತರ ಪ್ರಾಬಲ್ಯಕ್ಕೆ ಬಂದ ಶಂಕರಾಚಾರ್ಯರ

( ಮುಂದುವರಿಯುತ್ತದೆ. )

# ಸುದ್ದಿ ಸಾರ

## ಪರಮ ಪೂಜ್ಯರ ಜನ್ಮದಿನಾಚರಣೆ ಸಮಾರಂಭಗಳು.

ದಿ. 12-8-85 ರಂದು ಶ್ರೀ ಸಿದ್ದಗಂಗಾ ವಿದ್ಯಾ ಸಂಸ್ಥೆಯ ಆಶ್ರಯದಲ್ಲಿ ನಡೆಯು
ತ್ತಿರುವ ನಿಟ್ಟೂರು ಶ್ರೀ ವಿನಾಯಕ ಪದವಿ ಪೂರ್ವ ಕಾಲೇಜಿನಲ್ಲಿ ಪರಮ ಪೂಜ್ಯ
ಶ್ರೀ ಶ್ರೀ ಗಳವರ 82ನೆಯ ಹುಟ್ಟು ಹಬ್ಬವನ್ನಾಚರಿಸಲಾಯಿತು. ಬೆಂಗಳೂರಿನ
ಜಗದ್ಗುರು ಶ್ರೀ ರೇಣುಕಾಚಾರ್ಯ ಕಾಲೇಜಿನ ರಸಾಯನ ಶಾಸ್ತ್ರ ವಿಭಾಗದ ಮುಖ್ಯ
ಸ್ಥರಾದ ಶ್ರೀ ಕೆ. ಸಿದ್ಧಗಂಗಯ್ಯನವರು ಅಧ್ಯಕ್ಷತೆ ವಹಿಸಿ ಮಾತನಾಡುತ್ತ
"ಪರಮ ಪೂಜ್ಯರ ವ್ಯಕ್ತಿತ್ವ ಹಿಮಾಲಯ ಸದೃಶವಾದದ್ದು. ಸಮಾಜಕ್ಕೆ ರಾಷ್ಟ್ರಕ್ಕೆ
ಪೂಜ್ಯರು ಸಲ್ಲಿಸಿರುವ ಸೇವೆ ಅಗಣಿತವಾದದ್ದು. ಅವರ ಮನಸ್ಸಿಗೆ ಸಂತೋಷವಾಗು
ವಂತೆ ಬಾಳುವುದೇ ನಾವು ಅವರಿಗೆ ಅರ್ಪಿಸಬೇಕಾದ ಕಾಣಿಕೆ" ಎಂಬುದಾಗಿ
ನುಡಿದರು. ಮುಖ್ಯ ಅಥಿತಿಗಳಾಗಿ ಆಗಮಿಸಿದ್ದ ಶ್ರೀ ಹೆಚ್. ವಿ. ವೀರಭದ್ರಯ್ಯನವರು
ಪರಮ ಪೂಜ್ಯರು ಮಾಡಿರುವ ಅಖಂಡ ಸೇವೆಯ ಪರಿಚಯ ಮಾಡಿಕೊಡುತ್ತ,
ಕೃತಜ್ಞತೆ ಸಮಾಜ ಪೂಜ್ಯರಿಗೆ ಸಲ್ಲಿಸ ಬೇಕಾದ ಕಾಣಿಕೆ ಎಂದರು. ಇದೇ ಸಂದರ್ಭ
ದಲ್ಲಿ ಶ್ರೀ ಬಿ. ವಿ. ಮಲ್ಲಿಕಾರ್ಜುನಯ್ಯನವರು ವಿದ್ಯಾರ್ಥಿ ಸಂಘದ ಉದ್ಘಾಟನೆ
ಮಾಡುತ್ತ ಸದ್ಗುಣ, ಶ್ರದ್ಧೆ, ಅಭ್ಯಾಸಗಳನ್ನು ವಿದ್ಯಾರ್ಥಿಗಳು ಪಠ್ಯೇತರ ಚಟುವಟಿಕೆ
ಗಳ ಮೂಲಕವೂ ರೂಢಿಸಿ ಕೊಳ್ಳಬೇಕು ಎಂದು ನುಡಿದರು. ಪ್ರಾರಂಭದಲ್ಲಿ ಪ್ರಾಚಾರ್ಯ
ರಾದ ಶ್ರೀ ಎಸ್. ಸೀಬಯ್ಯನವರು ಸ್ವಾಗತಿಸಿದರು. ಕೊನೆಯಲ್ಲಿ ಶ್ರೀ ಶಂಕರಪ್ಪ
ನವರು ವಂದಿಸಿದರು. ಶ್ರೀ ಬಿ. ಎನ್. ಸಿದ್ಧಲಿಂಗಯ್ಯನವರು ಕಾರ್ಯಕ್ರಮ
ನಿರೂಪಿಸಿದರು.

ದಿನಾಂಕ 15-8-89 ರಂದು ಬೆಂಗಳೂರು ಜಿಲ್ಲೆ ಬೂದಿಗೆರೆ ಗ್ರಾಮದ ಶ್ರೀ
ಸಿದ್ಧಗಂಗಾ ಗ್ರಾಮಾಂತರ ಪ್ರೌಢಶಾಲೆಯಲ್ಲಿ ಪರಮ ಪೂಜ್ಯ ಶ್ರೀ ಶ್ರೀಗಳವರ
ಹುಟ್ಟು ಹಬ್ಬದ ಸಮಾರಂಭದಲ್ಲಿ ಪಾಲ್ಗೊಂಡಿದ್ದ ಮುಖ್ಯಅತಿಥಿಗಳಾದ. ಪೂಜ್ಯ
ಶ್ರೀ ಶ್ರೀಗಳಾದ ಬೇಲಿ ಮಠದ ಶ್ರೀ ಶಿವರುದ್ರ ಸ್ವಾಮಿಗಳವರು ಮಾತನಾಡುತ್ತ
"ಪೂಜ್ಯ ಶ್ರೀ ಶ್ರೀ ಶಿವಕುಮಾರ ಸ್ವಾಮಿಗಳವರು ಅಪೂರ್ವ ಯುಗಪುರುಷರು
ಎಂಬುದಾಗಿ ನುಡಿದರು. ಮತ್ತೊಬ್ಬ ಮುಖ್ಯ ಅತಿಥಿಗಳಾದ, ಶಾಸಕರಾದ
ಶ್ರೀ ಕೃ.ನರಹರಿಯವರು "ಮಠಾಧಿ ಪತಿಗಳಾಗಿ ಏನು ಕೆಲಸ ಮಾಡಬೇಕು ಎನ್ನುವುದಕ್ಕೆ
ಪೂಜ್ಯ ಶ್ರೀ ಶ್ರೀಗಳು ಉದಾಹರಣೆಯಾಗಿದ್ದಾರೆ" ಎಂದರು. "ಪೂಜ್ಯ ಸ್ವಾಮಿ-
ಗಳು ಭಗವಂತನ ಸ್ವರೂಪ ವಾಗಿದ್ದಾರೆ" ಎಂದರು ಮಾಜಿ ಸಚಿವರಾದ ಶ್ರೀ ವೀರ
ಣ್ಣನವರು. ಮುಂದುವರಿದು ಶ್ರೀ ಶ್ರೀಗಳಿಂದ ನಾವು ಶಿಸ್ತನ್ನು ಕಲಿಯ ಬೇಕಾಗಿದೆ
ಎಂದು ನುಡಿದರು. ಬೆಂಗಳೂರು ಜಿಲ್ಲಾ ಪರಿಷತ್ತಿನ ಅಧ್ಯಕ್ಷರಾದ ಶ್ರೀ ನಾರಾ



ಯಣ ಸ್ವಾಮಿಗಳು ಮಾತನಾಡುತ್ತ" ದೀನ ದಲಿತರ ಸೇವೆಯ ಮಹಾ ಮಣಿಹವನ್ನು
ಪೂಜ್ಯ ಶ್ರೀ ಶ್ರೀಗಳಂತೆ ನಡಸಿಕೊಂಡು ಬಂದಿರುವ ಮತ್ತೊಂದು ಉದಾಹರಣೆ
ವಿರಳ" –ಎಂದರು. ಆಧ್ಯಾತ್ಮಿಕ ಹಾಗೂ ಲೋಕ ಸಂಗ್ರಹ ಚರ್ಯೆಯಲ್ಲಿ ಔನ್ನತ್ಯ
ವನ್ನು ತಂದು ಕೊಟ್ಟಿದ್ದಾರೆ ಪೂಜ್ಯ ಶ್ರೀ ಶ್ರೀಗಳೆಂಬದಾಗಿ ಮಾಜಿ ಸಚಿವರಾದ
ಶ್ರೀ ಚಂದ್ರಶೇಖರ್ ನುಡಿದರು. ದಣಿವನ್ನರಿಯದ, ದುಡಿಮೆಯನ್ನೇ ಭಗವಂತನೆಂದ-
ರಿದ ಮಂತ್ರ ಪುರುಷರಾಗಿದ್ದಾರೆ ಮಹಾತಪಸ್ವಿಗಳಾದ ಪೂಜ್ಯ ಶ್ರೀ ಶ್ರೀಗಳೆಂಬುದಾಗಿ
ಶ್ರೀ ಸಿದ್ಧಗಂಗಾ ಕಾಲೇಜಿನ ಶ್ರೀ ಬಿ. ವೀರಭದ್ರಯ್ಯನವರು ಉಪನ್ಯಾಸ ಮಾಡಿ-
ದರು. ಸಭೆಯಲ್ಲಿ ಪ್ರೌಢಶಾಲಾ ಕಟ್ಟಡದ ದಾನಿಗಳಾದ ಶ್ರೀ ಮುನಿ ಸ್ವಾಮಪ್ಪ
ದಂಪತಿಳನ್ನು ಸನ್ಮಾನಿಸಲಾಯಿತು.

ದಿ-13-9-89 ರಂದು ಮಧಗಿರಿ ತಾ॥ ನೇರಳೆಕೆರೆ ಗ್ರಾಮದಲ್ಲಿ ಶ್ರೀ ರಂಗನಾಥ
ಪ್ರೌಢಶಾಲೆಯಲ್ಲಿ ಪರಮ ಪೂಜ್ಯ ಶ್ರೀ ಶ್ರೀಗಳವರ ಹುಟ್ಟು ಹಬ್ಬದ ಆದ್ದೂರಿಯ
ಸಮಾರಂಭದಲ್ಲಿ ಮುಖ್ಯ ಅತಿಥಿಗಳಾಗಿ ಮಾತನಾಡುತ್ತ ಶ್ರೀ ಸಿದ್ಧಗಂಗಾ ವಿದ್ಯಾ
ಸಂಸ್ಥೆಯ ಶಿಕ್ಷಣ ನಿರ್ದೇಶಕರೂ, ಶ್ರೀ ಸಿದ್ಧಗಂಗಾ ಶಿಕ್ಷಣ ಕಾಲೇಜಿನ ಪ್ರಾಚಾರ್ಯ-
ರೂ ಆದ ಶ್ರೀ ಸಿದ್ಧಲಿಂಗ ಮೂರ್ತಿಯವರು ಶ್ರೀ ಸಿದ್ಧಗಂಗಾ ಮಠ ಕೇವಲ ಅಂಥ
ಸಂಪ್ರದಾಯಗಳ ಆರಾಧನಾ ಸ್ಥಳವಾಗಿಲ್ಲ, ಅದೊಂದು ಅರ್ಥಪೂರ್ಣ ನವೋದಯ
ಶಿಕ್ಷಣ ಮಹಾ ವಿದ್ಯಾಲಯವಾಗಿದೆ. ಅಲ್ಲಿ ಅನೇಕ ರೀತಿಯ ಇಲಾಖೆಗಳಂತಹ
ಜೀವನ ಶಿಕ್ಷಣದ ನಾನಾ ವಿಭಾಗಗಳಿಗಿವೆ. ಉದಾ: ಶ್ರೀ ಸಿದ್ಧಲಿಂಗೇಶ್ವರ ದೇವಾ-
ಲಯ, ಯಾತ್ರರ್ಥಿಗಳೂ ಯೋಗಕ್ಷೇಮ ಇಲಾಖೆ, ಸಂಸ್ಕೃತ ಮಹಾವಿದ್ಯಾಲಯ,
ನಾಲ್ಕು ಸಾವಿರ ಜನ ವಿದ್ಯಾರ್ಥಿಗಳಿಗೆ ಅಶನ ವಸನ, ಪಶು ಸಂಗೋಪನ ವಿಭಾಗ,
ವ್ಯವಸಾಯ ವಿಭಾಗ ಮುಂತಾಗಿ. ಈ ಎಲ್ಲ ಕಾರ್ಯಗಳ ಹಿಂದೆ ಒಂದು ಮಹಾ
ಪವಿತ್ರ ಶಕ್ತಿಯ ನಿರಂತರ ನಿಷ್ಕಾಮ ಸೇವೆಯಿದೆ ಎಂಬುದನ್ನು ಜನತೆ ತಿಳಿಯ
ಬೇಕು ಎಂದು ಉಪನ್ಯಾಸ ಮಾಡಿದರು. ಶ್ರೀ ಬಿ. ವೀರಭದ್ರಯನವರು ಭಾಷಣ
ಮಾಡುತ್ತ ಕರುಣೆಯ ಕಡಲು, ದೀನರ ದಾರಿದೀಪ ಪೂಜ್ಯ ಶ್ರೀ ಶ್ರೀಗಳೆಂದು
ಭಕ್ತಿಸಮರ್ಪಣೆ ಮಾಡಿದರು. ಶಾಲೆಯ ಹಳೆಯ ವಿದ್ಯಾರ್ಥಿ ಶ್ರೀ ಪಾಷ
ಮಾತನಾಡುತ್ತ ಪೂಜ್ಯ ಶ್ರೀ ಶ್ರೀಗಳವರ ದಾಸೋಹ ಮಠ ಭಾರತದಲ್ಲಿ ಪ್ರಸಿದ್ಧಿ
ಪಡೆದಿದೆ ಎಂದರು ಅಪರೂಪದ ಸೇವಾ ಜೀವನದಿಂದ ಪೂಜ್ಯ ಶ್ರೀ ಶ್ರೀಗಳು ನಮ್ಮ
ಗೆಲ್ಲಾ ಮಾರ್ಗದರ್ಶಿಗಳಾಗಿದ್ದಾರೆ ಎಂದರು. ಅಧ್ಯಕ್ಷತೆ ವಹಿಸಿದ್ದ ಶ್ರೀ ಜಯರಾಮ್
ರವರು.

ದಿನಾಂಕ-15-9-89 ರಂದುತುಮಕೂರಿನ ಶ್ರೀ ಸಿದ್ಧಗಂಗಾ ಪದವಿಪೂರ್ವ-
ಕಾಲೇಜಿನ ಸಂಕೀರ್ಣದಲ್ಲಿ ಹುಟ್ಟು ಹಬ್ಬವನ್ನು ಆಚರಿಸಲಾಯಿತು.

ಪರಮ ಪೂಜ್ಯ ಡಾ|| ಶಿವಕುಮಾರ ಸ್ವಾಮಿಗಳು ಶ್ರೀ ಸಿದ್ಧಗಂಗಾ ಮಠದ ಸೇವೆಗೆ ಮುಂದಾದ 60 ನೇ ವಾರ್ಷಿಕ ಉತ್ಸವ, ಹಗೂ ಶ್ರೀ ಶ್ರೀ ಗಳ 82 ನೇ ಹುಟ್ಟು ಹಬ್ಬವನ್ನು ಕೃತಜ್ಞತಾ ಸಮರ್ಪಣಾದಿನವನ್ನಾಗಿ ಆಚರಿಸುತ್ತಿದ್ದೇವೆ ಎಂದು ಕನ್ನಡ ಸಾಹಿತ್ಯ ಪರಿಷತ್ತಿನ ಅಧ್ಯಕ್ಷರಾದ ಪ್ರೊ || ಜಿ. ಎಸ್. ಸಿದ್ದಲಿಂಗಯ್ಯನವರು ಶ್ರೀ ಸಿದ್ಧಗಂಗಾ ಪದವಿಪೂರ್ವ ಕಾಲೇಜಿನ ಆವರಣದಲ್ಲಿ 15-9-89 ಶುಕ್ರವಾರ ನಡೆದ ಶ್ರೀ ಶ್ರೀ ಗಳ 82 ನೇ ಹುಟು ಹಬ್ಬದ ಆಚರಣಾ ಮಹೋತ್ಸವ ಸಂದರ್ಭ ದಲ್ಲಿ ತಿಳಿಸಿದರು. ಮುಂದುವರಿದು ಮಾತನಾಡುತ್ತಾ ಜೋಳಿಗೆ ಮತ್ತು ರುದ್ರಾಕ್ಷಿಯನ್ನು ಆಸ್ತಿಯನ್ನಾಗಿ ಮಾಡಿಕೊಂಡು ಬೆಳೆದ ಮಠ ಶ್ರೀ ಸಿದ್ದಗಂಗಾ ಮಠ. ಲೋಕದ ಐಶ್ವರ್ಯವೆಲ್ಲಾ ಜೋಳಿಗೆಯ ಐಶ್ವರ್ಯ. ಇತರರಿಗಾಗಿ, ಮಕ್ಕಳಿಗಾಗಿ ಕೇಳಿದಾಗ ಜೋಳಿಗೆ ಐಶ್ವರ್ಯವಾಗುತ್ತದೆ ಎಂದರು. ದುಃಖ ಬಂದಾಗ ಮಹಾನುಭಾವರು ಎತ್ತರಕ್ಕೆ ಏರುತ್ತಾರೆ. ಹಲವೆಡೆ ಸಮುದ್ರದ ಹಾಗೆ ಸಮಸ್ಯೆಗಳೆಲ್ಲಾ ಮುಳುಗಿಹೋಗುತ್ತವೆ. ಇಡೀಕ್ಷೇತ್ರವನ್ನು ವಿದ್ಯಾ ಕೇಂದ್ರವನ್ನಾಗಿ ಮಾಡಿದ್ದಾರೆ ಶ್ರೀ ಶ್ರೀಗಳು. ಸಿದ್ಧಗಂಗಾ ವಿಶ್ವವಿದ್ಯಾಲಯವನ್ನು ಪಡೆಯಬಹುದು ಶ್ರೀ ಶ್ರೀ ಸ್ವಾಮಿಗಳದ್ದು ಸದಾ ದೇವರಲ್ಲಿ ಸಂಲಗ್ನವಾದ ಮನಸ್ಸು ದೊಡ್ಡವರನ್ನು ನೋಡುತ್ತಾ ದೊಡ್ಡವರಾಗಿ ಬೆಳೆಯಬೇಕು. ಅವರನ್ನು ನೋಡುವುದರಿಂದ ನಮ್ಮ ಹೃದಯ ದೊಡ್ಡದಾಗುತ್ತದೆ ಎಂದು ಹೇಳಿದರು.

ಜಿಲ್ಲಾ ಕ||ಸಾ||ಪ|| ಅಧ್ಯಕ್ಷ ಶ್ರೀ ಕವಿತಾ ಕೃಷ್ಣ ಮಾತನಾಡಿ ಅಸ್ಪೃಶ್ಯರಿಗೆ ಸಂಸ್ಕೃತ ಓದಲು ಅವಕಾಶ ಕಲ್ಪಿಸಿ ಸಂಸ್ಕೃತದ ಕಂಪು ಹರಡುವಂತೆ ಮಾಡಿದ್ದಾರೆ ಪೂಜ್ಯ ಶ್ರೀಗಳು ಎಂದರು, ಪೂಜ್ಯರು ಕನ್ನಡದ ರವೀಂದ್ರನಾಥ ಠಾಕೂರರು ಎಂದರು.

ಬೆಂ|| ಸರ್ವಜ್ಞ ವಿದ್ಯಾ ಸಂಸ್ಥೆಯ ಶ್ರೀ ಬಿ. ಎಸ್. ಪರಮಶಿವಯ್ಯನವರು ಮಾತನಾಡುತ್ತಾ ಶ್ರೀ ಮಠದಲ್ಲಿ ಕಳೆದ ತಮ್ಮ ಬಾಲ್ಯ ಜೀವನವನ್ನು ಸ್ಮರಿಸಿಕೊಂಡರು. ಪೂಜ್ಯರು ಗ್ರಾಮಾಂತರ ಜನರ ಭಾಗ್ಯ - ಸಮಾಜದ ದೊಡ್ಡ ಆಸ್ತಿ ಎಂದು ಹೇಳಿ ಶ್ರೀ ಶ್ರೀಗಳು ನಮ್ಮನ್ನು ಪುನೀತರನ್ನಾಗಿ ಮಾಡಿದ್ದಾರೆ ಎಂದರು,

ಅಧ್ಯಕ್ಷತೆ ವಹಿಸಿದ್ದ ಜಿಲ್ಲಾಧಿಕಾರಿಗಳಾದ ಶ್ರೀ ಪೆರುಮಾಳ್ ಅವರು ನಾನಿಲ್ಲಿ ಭಕ್ತಾದಿಯಾಗಿ ಬಂದಿದ್ದೇನೆ. ಬಸವಣ್ಣನವರ 'ಕಾಯಕವೇ ಕೈಲಾಸ' ವೆಂಬ ಮಾತಿಗೆ ಭಾಷ್ಯವಾದ ಬದುಕು ಪೂಜ್ಯಸ್ವಾಮಿಗಳದ್ದು ಇಡೀ ಕರ್ನಾಟಕವೇಕೆ ಭಾರತದಲ್ಲಿ ಶ್ರೀ ಸಿದ್ಧಗಂಗಾ ಕ್ಷೇತ್ರದ ಮಹಿಮೆ ಗೊತ್ತಾಗಿದೆ ಎಂದರು.



82 ವರ್ಷಗಳಲ್ಲಿ 82 ವಿದ್ಯಾಸಂಸ್ಥೆಗಳನ್ನು ಸ್ಥಾಪಿಸಿ, ಸಹಸ್ರಾರು ಜನರಿಗೆ ಉದ್ಯೋಗ ನೀಡಿ 20,000 ವಿದ್ಯಾರ್ಥಿಗಳಿಗೆ ವಿದ್ಯಾ ಸೌಲಭ್ಯ ಮಾಡಿಕೊಟ್ಟಿದ್ದಾರೆ ಶ್ರೀ ಶ್ರೀಗಳು ಪೂಜ್ಯಸ್ವಾಮಿಜಿಯವರು ನಡೆಸುತ್ತಿರುವ ಶಾಲೆಯಲ್ಲಿ ಓದುವ ವಿದ್ಯಾರ್ಥಿಗಳಿಗೆ "ಹಿರಿದಾದ ಸೇವೆ ಮಾಡಿರಿ" ಎಂದು ಕರೆ ನೀಡಿ. ಅದೇ ನೀವು ಪೂಜ್ಯ ಸ್ವಾಮೀಜಿಯವರಿಗೆ ಸಲ್ಲಿಸ ಬೇಕಾದ ಕಾಣಿಕೆ ಎಂದು ಹೇಳಿದರು.

ಬೆಂಗಳೂರಿನ, ನಂ 94 ಸಿ ಒಂದನೆ ಆರ್ ಬ್ಲಾಕ್ ರಾಜಾಜಿನಗರದ ಶ್ರೀ ಶರಣ ಸೇವಾ ಸಮಾಜದವರು ನೂತನವಾಗಿ ನಿರ್ಮಿಸಿದ ಶ್ರೀ ಶರಣ ಸೇವಾ ಸಾಮೂಹಿಕ ಸಭಾ ಭವನದ ಉದ್ಘಾಟನೆಯನ್ನು ದಿ- 13-8-89 ರಂದು ಬೆಳಿಗ್ಗೆ ಪರಮ ಪೂಜ್ಯ ಶ್ರೀ ಶ್ರೀ ಗಳವರು ಉದ್ಘಾಟಿಸಿದರು. ಸಭೆಯ ಅಧ್ಯಕ್ಷತೆಯನ್ನು ಶ್ರೀ ಶ್ರೀ ಶಿವರಾತ್ರಿ ದೇಶಿ ಕೇಂದ್ರ ಸ್ವಾಮಿಗಳು ವಹಿಸಿದ್ದ ಶುಭ ಸಂದಭದಲ್ಲಿ ಬೇಲಿ ಮಠದ ಪೂಜ್ಯ ಶ್ರೀ ಗಳವರಾದ ಶಿವಾನುಭವ ಚರಮೂರ್ತಿ ಶ್ರೀ ಶ್ರೀ ಶಿವರುದ್ರ ಸ್ವಾಮಿಗಳು ಆಶೀರ್ವಚನ ನೀಡಿದರು.

ದಿ. 18 8.89 ರಂದು ಟಿ ನರಸೀಪುರ ತಾಲ್ಲೂಕು ಸೋಸಲೆ ಗ್ರಾಮದ ತೋಪಿನ ಮಠದಲ್ಲಿ ಜರುಗಿದ ಶಿವಯೋಗಿ ಪೂಜ್ಯ ಷಡಕ್ಷರ ಸ್ವಾಮಿಗಳವರ 36 ನೆ ಪುಣ್ಯಾರಾಧನೆ ಸಮಾರಂಭದಲ್ಲಿ ಅಧ್ಯಕ್ಷತೆಯನ್ನು ವಹಿಸಿ ಮಾತನಾಡುತ್ತ ಪರಮ ಪೂಜ್ಯ ಶ್ರೀ ಶ್ರೀ ಗಳವರು ಮಠಗಳು ಗ್ರಾಮೀಣ ಜನತೆಯನ್ನು ಧಾರ್ಮಿಕ ಶಿಕ್ಷಣದ ಕಡೆಗೆ ಗಮನ ಕೊಡುವಂತೆ ಶ್ರಮಿಸ ಬೇಕಾಗಿದೆ ಲೌಕಿಕ ಶಿಕ್ಷಣ ದಂತೆಯೇ ಆತ್ಮ ಜ್ಞಾನವನ್ನು ತಿಳಿಸುವ ವಿದ್ಯೆಯ ಅಗತ್ಯವನ್ನು ಮರೆಯ ಬಾರದು; ಅಲ್ಲದೆ ಮಠಾಧಿಪತಿಗಳ ಜೀವನಕ್ರಮ ಸಮಾಜ ಜೀವನಕ್ಕೆ ಮಾದರಿ ಯಾಗಿರಬೇಕೆಂದು ಆಶೀರ್ವಚನ ನೀಡಿದರು.

ಸಮಾರಂಭದ ನೇತೃತ್ವವನ್ನು ವಹಿಸಿದ್ದ ಚಿತ್ರದುರ್ಗದ ಬೃಹನ್ ಮಠದ ಪೂಜ್ಯ ಜಗದ್ಗುರು ಮಲ್ಲಿಕಾರ್ಜುನ ಮುರುಘರಾಜೇಂದ್ರ ಸ್ವಾಮಿಗಳು ಆಶೀರ್ವಚನ ನೀಡುತ್ತ ಮೊದಲು ನಾವು ಎದೆಯ ಮೇಲೆ ಲಿಂಗಕಟ್ಟ ಬೇಕು ಅನಂತರ ಲಿಂಗಕ್ಕೆ ಎದೆಕಟ್ಟಬೇಕು ಎಂದು ನುಡಿದರು.

ಸಮಾರಂಭವನ್ನು ಸುತ್ತೂರು ಜಗದ್ಗುರು ಪೂಜ್ಯ ಶ್ರೀ ಶ್ರೀ ಶಿವರಾತ್ರಿ ದೇಶಿ ಕೇಂದ್ರ ಸ್ವಾಮಿಗಳು ಉದ್ಘಾಟಿಸಿದರು ಬೇಲಿಮಠದ ಪೂಜ್ಯ ಶ್ರೀ ಶ್ರೀ ಶಿವಾನುಭವ ಚರಮೂರ್ತಿ ಶಿವರುದ್ರ ಸ್ವಾಮಿಗಳು ಧಾರ್ಮಿಕೋಪನ್ಯಾಸ ಮಾಡಿದರು.

ಸಮಾಜದ ಶುದ್ಧೀಕರಣ ಕಾರ್ಯದಲ್ಲಿ ತಾಯಿ ಮತ್ತು ಶಿಕ್ಷಕರ ಕರ್ತವ್ಯ ಮಹತ್ವಪೂರ್ಣವಾದದ್ದಾಗಿದೆ ಎಂದು ಆಶೀರ್ವಚನ ನೀಡುತ್ತ ಪರಮಪೂಜ ಶ್ರೀ-

ಶ್ರೀಗಳವರು ದಿ. 25. 8. 89 ರಂದು ಹೆಬ್ಬೂರಿನ ಈಶ್ವರ ಸೇವಾ ಸಂಘದ ಉದ್ಘಾಟನಾ ಸಮಾರಂಭದ ಅಧ್ಯಕ್ಷತೆ ವಹಿಸಿದ್ದ ಸಂದರ್ಭದಲ್ಲಿ ನುಡಿದರು. ಮುಂದುವರಿದು ಕುಡಿತದ ಪಿಡುಗಿನಿಂದ ಜನಾಂಗ ಅದರಲ್ಲೂ ಯುವಜನಾಂಗ ಇಂದು ದೂರ–ಸರಿಯದಿದ್ದರೆ ಭವಿಷ್ಯವಿಲ್ಲ ಎಂದು ಎಚ್ಚರಿಸಿದರು. "ಸಂತೋಷಂ ಜನಯೇತ್ ಪ್ರಾಜ್ಞಃ ತದೇವ ಈಶ್ವರಪೂಜನಂ" ಎನ್ನುತ್ತಾರೆ, ಇತರರಿಗೆ ಸಂತೋಷವಾಗುವಂತೆ ನಡೆದುಕೊಳ್ಳುವುದೇ ನಿಜವಾದ ಈಶ್ವರ ಪೂಜೆ ಎಂದರು.

ಸಿದ್ಧಗಂಗಾಮಠದಲ್ಲಿಂದು ಐದುಸಾವಿರ ವಿದ್ಯಾರ್ಥಿಗಳು ಅಭ್ಯಾಸಮಾಡುತ್ತಿದ್ದಾರೆ. ಶ್ರೀ ಮಠ ಮಾಡಿರುವ ಮಹತ್ವ ಪೂರ್ಣವಾದ ಸೇವೆಯಿಂದ ತುಮಕೂರು ಜಿಲ್ಲೆ ಅಪಾರ ಸಂಖ್ಯೆಯ ವಿದ್ಯಾವಂತರನ್ನು ಪಡೆಯುವಂತಾಗಿದೆ, ಶಿಸ್ತು ಸಂಯಮಗಳ ಸುಸಂಸ್ಕೃತ ಯುವ ಜನಾಂಗವನ್ನು ಪೂಜ್ಯ ಶ್ರೀ ಶ್ರೀಗಳವರು ರೂಪಿಸುತ್ತ ಬಂದಿರುವುದು ಹೆಮ್ಮೆ ಪಡಬೇಕಾದ ವಿಚಾರ ಎಂದು ಉದ್ಘಾಟನಾ ಭಾಷಣ ಮಾಡಿದ ಜಿಲ್ಲಾಧಿಕಾರಿಗಳಾದ ಶ್ರೀ ಐ. ಆರ್. ಪೆರುಮಾಳ್‌ರವರು ಜಾತಿ ಮತ್ತು ವರದಕ್ಷಿಣೆ ಸಮಾಜವನ್ನಿಂದು ಕಾಡುತ್ತಿರುವ ಮಹಾ ರೋಗಗಳು. ಅವುಗಳ ಮೂಲೋತ್ಪಾಟನಕ್ಕೆ ಈಶ್ವರ ಸೇವಾ ಸಂಘಗಳಂಥ ಸಂಸ್ಥೆಗಳೂ ಶ್ರಮಿಸ ಬೇಕು ಎಂದು ನುಡಿದರು. ಸಮಾರಂಭದಲ್ಲಿ ಶ್ರೀ ಬಿ.ಪಿ. ಗಂಗಾಧರ್, ಶ್ರೀ ಟಿ ಕೆ. ನಂಜುಡಪ್ಪ ಶ್ರೀ ಎಂ. ಗಂಗಣ್ಣ, ಶ್ರೀ ವಿದ್ವಾನ್ ಎಲ್ ಸಿದ್ಧಗಂಗದೇವರು ಮತ್ತು ಶ್ರೀಮತಿ ನಂಜಮ್ಮನವರು ಮಾತನಾಡಿದರು. ಪ್ರಾರಂಭದಲ್ಲಿ ಪೂಜ್ಯ ಶ್ರೀ ಶಿವಪಂಚಾಕ್ಷರಿ ಸ್ವಾಮಿಗಳು (ರಾಮೇನಹಳ್ಳಿ ಮಠ) ಜ್ಯೋತಿ ಬೆಳಗಿಸಿ ಮಾತನಾಡಿದರು. ಡಾ॥ ಎಸ್, ಎಂ, ಬಿ. ಶಾಸ್ತ್ರಿಗಳು ಸ್ವಾಗತಿಸಿದರು. ಶ್ರೀ ಎಚ್, ಮಲಪ್ಪ ನವರು ವಂದನೆ ಸಲ್ಲಿಸಿದರು. ಶ್ರೀ ರೇಣುಕಯ್ಯ ಕಾರ್ಯಕ್ರಮ ನಿರೂಪಿಸಿದರು.





**–: ಶ್ರೀ ಶ್ರೀಗಳವರ ಈ ತಿಂಗಳ ಕೆಲವು ಕಾರ್ಯಕ್ರಮ :–**

2-9-89- ಭಾರತೀಯ ವಿದ್ಯಾಭವನ-ಬೆಂಗಳೂರು- ಬಸವೇಶ್ವರವಚನದ ಧ್ವನಿಸುರಳಿ-ಮುದ್ರಣ, ಕಾರ್ಯಕ್ರಮ

4-9-89 ಬೆಂಗಳೂರು-ಬಸವ ಮಂಟಪದ ಉದ್ಘಾಟನೆ.

5-9-89- ಶಿಕ್ಷಕರ ದಿನಾಚರಣೆ ಸಮಾರಂಭ ಶಿಕ್ಷಕರ ಭವನ–ತುಮಕೂರು

6-9-89- ಶ್ರೀ ಗಣೇಶೋತ್ಸವ ಸಮಾರಂಭ-ಶ್ರೀ ಸಿದ್ಧಗಂಗಾ ಪ್ರೌಢಶಾಲೆ ತುಮಕೂರು.

7-9-89- ಉಡುವೇಗೆರೆ– ಮಾಗಡಿ ತಾಲ್ಲೂಕು ದೇವತಾ ಪ್ರತಿಷ್ಠಾಪನೆ ಸಮಾರಂಭ

8-9-89. ಅಂಜನಾಪುರ-ರಾಮನಗರ ತಾಲ್ಲೂಕು-ದೀಕ್ಷ ಸಮಾರಂಭ

9-9-89- ಶ್ರೀ ಗಣೇಶೋತ್ಸವ ಸಮಾರಂಭ- ದೊಡ್ಡ ಬಳ್ಳಾಪುರ.

9-9-89- ಶ್ರೀ ಗಣೇಶೋತ್ಸವ ಸಮಾರಂಭ ಗುಡೇಮಾರನಹಳ್ಳಿ ಶ್ರೀ ಸಿದ್ಧಗಂಗಾ ಪದವಿಪೂರ್ವಕಾಲೇಜು

10-9-89 ಕೊತ್ತತ್ತಿ- ಮಂಡ್ಯ ಜಿಲ್ಲೆ- ಫ್ಯಾಕ್ಟರಿ ಸಮಾರಂಭ–

11-9-89 ಭಾರತೀ ವಿದ್ಯಾಭವನ ಬೆಂಗಳೂರು- ಬಸವೇಶ್ವರ ವಚನ ಕ್ಯಾಸೆಟ್ ಬಿಡುಗಡೆ.

12-9-89 ಶ್ರೀ ಜಿ. ಎಂ. ಸಿದ್ಧರಾಮಣ್ಣ ವಿದ್ಯಾರ್ಥಿ ನಿಲಯದ ಕಾರ್ಯಕಾರಿ ಮಿತಿಸಭೆ.

14-9-89 ಕಗ್ಗೆರೆ- ಕುಣಿಗಲ್ ತಾ–ದೇವಸ್ಥಾನದ ಸಮಾರಂಭ.

17-6-89 ಮೈಸೂರು. ವಿದ್ವಾನ್ ಶ್ರೀ ಕೆ. ಎಂ. ರೇವಣ್ಣ ಸಿದ್ಧಯ್ಯ ನವರ ಮನೆಯಲ್ಲಿ ಪೂಜೆ.

18-9-89- ಯಡೆಯೂರು ಕುಣಿಗಲ್ ತಾ - ಸಮಾರಂಭ.

23-9-89- ವಿಚಾರ ಗೋಷ್ಠಿಯ ಉದ್ಘಾಟನೆ- ಎಸ್ ಐ ಟಿ. ತುಮಕೂರು.

24-6-89- ಬೆಂಗಳೂರು–ಶಿವನಹಳ್ಳಿ ಮಠದಲ್ಲಿ ಪೂಜೆ.

26-9-89. ರಾಜ್ಯಮಟ್ಟದ ಪ್ರೌಢ ಶಾಲಾಮುಖ್ಯೋಪಾಧ್ಯಾಯರ ಹಾಗೂ ಪದವಿ ಪೂರ್ವ ಕಾಲೇಜಿನ ಪ್ರಾಂಶುಪಾಲರ ಸಮ್ಮೇಳನದಲ್ಲಿ ಅಧ್ಯಕ್ಷತೆ,

27-9-89- ಹಾಸನದ ಶ್ರೀ ಬಿ. ಸಿ. ಅಪ್ಪಸ್ವಾಮಿ ಗೌಡರ ಮನೆಯಲ್ಲಿ ಪೂಜೆ-

28-9-89- ನಂದಿಹಳ್ಳಿ ಜಮೀನಿನ ವೀಕ್ಷಣೆ

30-9-89- ತಿಪಟೂರು ತಾ॥ ಹಾಲ್ಕುರಿಕೆ ಜಮೀನಿನ ವೀಕ್ಷಣೆ.

30-9-89- ತುಮಕೂರಿನಲ್ಲಿ ಶ್ರೀ ರಾಮಜನ್ಮ ಭೂಮಿ ವಿಚಾರ ಸಂಕಿರಣ ಸಮಾರಂಭ.

"SIDDAGANGA" MONTHLY Reg No KRN Q-9

## ಬಸವ ಸಾಹಿತ್ಯ ಪ್ರೇಮಿಗಳಲ್ಲಿ ಒಂದು ಮನವಿ

### "ಕರ್ತಾರನ ಕಮ್ಮಟ"

ಶರಣ ಸಾಹಿತ್ಯ ರತ್ನ, ಡಾ|| ಹೆಚ್. ತಿಪ್ಪೇರುದ್ರಸ್ವಾಮಿಯವರಿಂದ ರಚಿತವಾಗಿರುವ, ಬಸವಣ್ಣನವರ ದಿವ್ಯ ಜೀವನವನ್ನು ಕುರಿತ ಮಹೋನ್ನತವಾದ ಕಾದಂಬರಿ "ಕರ್ತಾರನ ಕಮ್ಮಟ"ದ ತೃತೀಯ ಮುದ್ರಣದ ಪ್ರತಿಗಳು ಮಾರಾಟಕ್ಕೆ ಶೀಘ್ರದಲ್ಲಿಯೇ ಬಿಡುಗಡೆಯಾಗಲಿವೆ. "ಶ್ರೀ ಸಿದ್ಧಗಂಗಾ ಮಠದ ವತಿಯಿಂದ" ಪ್ರಕಟವಾಗುತ್ತಿರುವ ಕರ್ತಾರನ ಕಮ್ಮಟ ಸಮಾಜ ಬಾಂಧವರೆಲ್ಲರೂ ಓದಲೇಬೇಕಾದ ಮಹತ್ವ ಪೂರ್ಣ ಕೃತಿ. ಗ್ರಂಥದ ಗಾತ್ರ ಎಂಟುನೂರು ಪುಟಗಳಷ್ಟಿದ್ದು, "ಪರಮಪೂಜ್ಯ ಶ್ರೀ ಶ್ರೀ ಗಳವರ ಸುಂದರವಾದ ಭಾವಚಿತ್ರವನ್ನು ಒಳಗೊಂಡಿರುತ್ತದೆ". ಬೆಲೆ ಎಂಬತ್ತು ರೂಪಾಯಿಗಳಾಗುವಂತಿದ್ದರೂ ಬಸವತತ್ವ ಪ್ರಸಾರದ ದೃಷ್ಟಿಯಿಂದ ಕೇವಲ ಇಪ್ಪತ್ತೈದು ರೂಪಾಯಿಗಳಿಗೆ ಮಾರುವ ವ್ಯವಸ್ಥೆ ಮಾಡಲಾಗಿದೆ. ಆಸಕ್ತರು ಶ್ರೀ ಮಠದ " ಶ್ರೀ ಸಿದ್ಧಗಂಗಾ " ಪತ್ರಿಕಾಲಯದ ಈ ವಿಳಾಸಕ್ಕೆ ಸಂಪರ್ಕಿಸಲು ಕೋರಲಾಗಿದೆ.

ಸಿದ್ಧಗಂಗಾ ಮಾಸಪತ್ರಿಕೆ
ಶ್ರೀ ಸಿದ್ಧಗಂಗಾ ಮಠ
ತುಮಕೂರು ಜಿಲ್ಲೆ.

ಶ್ರೀ ಸಿದ್ಧಲಿಂಗೇಶ್ವರಸ್ವಾಮಿ ಮುದ್ರಣಾಲಯ, ಶ್ರೀ ಸಿದ್ಧಗಂಗಾ ಮಠ